## ಕ್ಷೇತ್ರ ವಾರ್ತೆಗಳು



ಸಾಲಿಗ್ರಾಮ: ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತಿನ ಉದ್ಘಾಟನೆ.
ದಿನಾಂಕ: ೦೭.೦೩.೨೦೨೨

ಸಾನ್ನಿಧ್ಯ: ಕರ್ಪೂರವಳ್ಳಿ ಶ್ರೀಮಠದ ಪೀಠಾಧ್ಯಕ್ಷರಾದ ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಶರಣ ಸಾಹಿತ್ಯ ಪರಿಷತ್ತಿಗೆ ದತ್ತಿ ನಿಧಿಯಾಗಿ ೧.೦೦ ಲಕ್ಷ ರೂಪಾಯಿಗಳನ್ನು ಚೆಕ್ ರೂಪದಲ್ಲಿ ಪರಿಷತ್ತಿನ ಅಧ್ಯಕ್ಷರಾದ ಪ್ರೊ. ಮಲೆಯೂರು ಗುರುಸ್ವಾಮಿ ಅವರಿಗೆ ನೀಡಿದರು.

ಚಿತ್ರದಲ್ಲಿ: ಗಾಯನಹಳ್ಳಿ ಕುಮಾರಸ್ವಾಮಿ, ಹೆಳವರಹುಂಡಿ ಸಿದ್ದಪ್ಪ, ರಮೇಶ್ ಕುಮಾರ್




ಬೆಂಗಳೂರು: ಅಂತರರಾಷ್ಟ್ರೀಯ ಚಲನಚಿತ್ರೋತ್ಸವ, 'ದ ಹೆರಿಟೇಜ್ ಆಫ್ ಶ್ರೀ ಸುತ್ತೂರ್ ಮಠ್' ಅನಿಮೇಶನ್ ಚಲನಚಿತ್ರ ಪ್ರದರ್ಶನ ದಿನಾಂಕ: ೦೮.೦೩.೨೦೨೨. ಚಿತ್ರದಲ್ಲಿ: ಗೊ.ರು. ಚನ್ನಬಸಪ್ಪ
ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಸುನಿಲ್ ಪುರಾಣಿಕ್, ಅಬ್ದುಲ್ ಕರೀಂ, ತುಂಗರೇಣುಕ




ಬೆಂಗಳೂರು: ಡಾ. ಕೋ. ಚೆನ್ನಬಸಪ್ಪನವರ ಜನ್ಮ ಶತಮಾನೋತ್ಸವ, ದಿನಾಂಕ: ೨೭.೦೨.೨೦೨೨
ಚಿತ್ರದಲ್ಲಿ: ಕೆ.ವಿ. ನಾಗರಾಜಮೂರ್ತಿ, ದಯಾನಂದ ಪಾಟೀಲ, ಡಾ. ಗುರುಪ್ರಸಾದ್, ಅನೂಪ್ ಸೀಳಿನ್
ಡಾ. ವಸುಂಧರಾ ಭೂಪತಿ, ಲಕ್ಷ್ಮಣ ಕೊಡಸೆ, ಪ್ರಕಾಶಮೂರ್ತಿ, ಡಾ. ಸಿಂ.ರಾ. ಹೊನ್ನಲಿಂಗಯ್ಯ



# ಮಹಾಮನೆ

ಸಂಪುಟ ೨೪ : ಸಂಚಿಕೆ ೦೯ ಏಪ್ರಿಲ್ - ೨೦೨೨

ಸಂಪಾದಕರು
**ಡಾ. ಎಂ.ಎಸ್. ಆಶಾದೇವಿ**



ಪ್ರಕಾಶಕರು
**ಗೊ.ರು. ಚನ್ನಬಸಪ್ಪ**
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು





**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯ ರಸ್ತೆ, ಜಯನಗರ ೮ನೆಯ ವಿಭಾಗ
ಬೆಂಗಳೂರು ೫೬೦ ೦೭೦, ದೂ: ೦೮೦ ೨೬೯೭ ೦೧೨೫
E-mail: mahamanemagazine@gmail.com





## ಸಂಚಿಕೆಯ ಅಂತರಂಗ

ಬಿನ್ನಹ ...... 

## ನಾಳಿನ ಬಾಗಿಲು ನಂದನವೆನ್ನುವ ಯುಗಾದಿ!

**ಯು**ಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ
ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ

ಎಷ್ಟು ಕಾಲ ಕಳೆದರೂ ಬೇಂದ್ರೆಯವರ ಈ ಸಾಲುಗಳು ಎಂದಿಗೂ ಹಳತಾಗುವುದಿಲ್ಲ. ಈ ಕವಿತೆಯ ಕೊನೆಯಲ್ಲಿ ಬೇಂದ್ರೆಯವರು ಮತ್ತೆ ಮತ್ತೆ ಮರಳಿ ಬರುವ ಯುಗಾದಿಯ ಬಗ್ಗೆ ಹೇಳುತ್ತಲೇ ಬದುಕಿನ ನಿತ್ಯನೂತನತೆಯನ್ನು ಕುರಿತು ಹೇಳುತ್ತಾರೆ. ಹುಟ್ಟು-ಸಾವುಗಳ ಶಾಶ್ವತ ಸತ್ಯದೆದುರಿಗೆ ನಶ್ವರದ್ದಾಗಿ, ಕ್ಷಣಭಂಗುರದ್ದಾಕಾಣುವ ಬದುಕು ಅದೆಷ್ಟು ಅರ್ಥಪೂರ್ಣವಾಗಬಲ್ಲುದು, ಸುಂದರವಾಗಿರಬಲ್ಲುದು ಎನ್ನುವುದನ್ನು ಬೇಂದ್ರೆ ಪ್ರತಿಪಾದಿಸುತ್ತಾರೆ. ನಶ್ವರತೆಯ ಕಾರಣಕ್ಕಾಗಿಯೇ ಬದುಕು ನಮಗೆ ಇನ್ನೂ ಹೆಚ್ಚು ಮಹತ್ವದ್ದಾಗಿ ಕಾಣಿಸಬೇಕು. ಕೊಟ್ಟ ಕುದುರೆಯ ಈ ಬದುಕನ್ನು ಯಾವುದೇ ದೂರುಗಳಿಲ್ಲದೆ, ಸಿನಿಕತನವಿಲ್ಲದೆ, ನಿರಾಶೆಯಿಲ್ಲದೆ ಎಂದೂ ಕಳೆದುಕೊಳ್ಳದ ಅದಮ್ಯ ಜೀವನ ಪ್ರೀತಿಯೊಂದಿಗೆ ಸಾಗಿಸುವುದೇ ಈ ಬದುಕಿಗೆ ನಾವು ಸಲ್ಲಿಸುವ ನಿಜವಾದ ಗೌರವ.

ಯುಗಾದಿ ಹಬ್ಬವು ನಿಜದಲ್ಲಿ ಬಯಸುತ್ತಿರುವುದು ಇದನ್ನೇ. ಭಾರತೀಯ ಹಬ್ಬಗಳಲ್ಲೆಲ್ಲಾ ಯುಗಾದಿಗೆ ಇನ್ನಿಲ್ಲದ ಮಹತ್ವ ಇರುವುದು ಈ ಕಾರಣಕ್ಕಾಗಿಯೇ. ಕಾರಣವಿದ್ದೋ, ಇಲ್ಲದೆಯೋ ಬದುಕಿನ ಬಗೆಗೆ ನಾವು ತಳೆಯಬಹುದಾದ ನಕಾರಾತ್ಮಕ ಭಾವವನ್ನು ತೊಡೆದು ಬದುಕನ್ನು ಗೌರವಿಸುವ ಕರಾರುಗಳಿಲ್ಲದೆ ಪ್ರೀತಿಸುವ ದೃಷ್ಟಿಕೋನವನ್ನು ನಮಗೆ ನಾವೇ ಹೊಚ್ಚಹೊಸದೆಂಬಂತೆ ತಂದುಕೊಳ್ಳುವುದೇ ಯುಗಾದಿ. ಇದರೊಂದಿಗೆ ಬೇವು-ಬೆಲ್ಲದ ಪರಿಕಲ್ಪನೆಯೂ ಹದವಾಗಿ ಬೆರೆತಿದೆ. ಸರಸ-ವಿರಸಗಳ, ಸುಖ-ದುಃಖಗಳ, ಸೋಲು-ಗೆಲುವುಗಳ ಸಮೀಕರಣವಾಗಿರುವ ಈ ಬದುಕನ್ನು ಪ್ರೀತಿಸುತ್ತಲೇ ಸಮಚಿತ್ತವನ್ನೂ ಬೆಳೆಸಿಕೊಳ್ಳುವುದು ಆರೋಗ್ಯಕರವಾದ ದೃಷ್ಟಿಕೋನ. ಇದೇ ಬದುಕಿನ ದಾರಿ. ಮತ್ತೆ ಬೇಂದ್ರೆಯವರನ್ನೇ ನೆನಪಿಸಿಕೊಳ್ಳುವುದಾದರೆ, ಬದುಕಿನೊಳಗೆ ಬಾಳುವ ನೆಲೆಯೊಂದನ್ನು ನಾವು ಅತಿಕಷ್ಟದಿಂದಲೇ ರೂಢಿಸಿಕೊಳ್ಳಬೇಕು. ಹಸಿವ ಮತ್ತು ಹುಸಿವ ಪ್ರಾಕೃತಿಕ ಸತ್ಯಗಳನ್ನು ನಾವು ನಿರಾಕರಿಸಲಾಗದು. ಆದರೆ, ಈ ದೇಹ ಮತ್ತು ಮನಸ್ಸುಗಳನ್ನು ನಿಯಂತ್ರಿಸುವ, ನಿಭಾಯಿಸುವುದು ಕಡುಕಷ್ಟದ ಕೆಲಸ. ಸುಖ-ದುಃಖಗಳನ್ನು ಸಮಾನವಾಗಿ ನೋಡುವುದು ಸಹಜಸಾಧ್ಯವಾಗಿದ್ದಿದ್ದರೆ ಮನುಷ್ಯ ಬದುಕಿನಲ್ಲಿ ದುರಂತಗಳೇ ಇರುತ್ತಿರಲಿಲ್ಲವಲ್ಲ. ಹಿಗ್ಗುವ ಮತ್ತು ಕುಗ್ಗುವ ಕಟುವಾಸ್ತವವನ್ನು ಹಿಗ್ಗದ ಮತ್ತು ಕುಗ್ಗದ ಮನೋವಿನ್ಯಾಸಕ್ಕೆ ತಂದುಕೊಳ್ಳುವುದು





ಜೀವಮಾನದ ಸಾಧನೆ. ಆದರೆ, ಕೊನೆಯ ಪಕ್ಷ ಇವುಗಳು ನಮ್ಮನ್ನು ಆಳಿ, ದುರಂತಕ್ಕೆ ತಳ್ಳದಂತೆ ನೋಡಿಕೊಳ್ಳುವುದಾದರೂ ನಮಗೆ ಸಾಧ್ಯವಾಗಬೇಕು. ಇದೊಂದು ನಿರಂತರವಾದ ಪ್ರಯತ್ನ. ಮಿಕ್ಕುಮೀರಿ ಹೋಗುವುದನ್ನು ಹಿಡಿಯುವ ಸಾಹಸ. ಹಾಗೆಂದು ಭವವನ್ನು ಬಿಟ್ಟು ವಿರಾಗಿಗಳಾಗಬೇಕೆನ್ನುವುದು ಇದರ ಉದ್ದೇಶವಲ್ಲ. ಇಹದ ಬದುಕನ್ನು, ಅದು ಕೊಡಬಹುದಾದ ಎಲ್ಲವನ್ನೂ ಪಡೆದುಕೊಳ್ಳುತ್ತಲೇ ಅದಕ್ಕೆ ಅಂಟಿನ ಹಾಗೆ ಅಂಟಿಕೊಳ್ಳಬಾರದು ಎನ್ನುವ ಎಚ್ಚರವೊಂದನ್ನು ಉಳಿಸಿಕೊಂಡರೆ ಬೇಕಾದಷ್ಟಾಯಿತು ಎನಿಸುತ್ತದೆ! ಬುದ್ಧ ಹೇಳಿದಂತೆ ಭೂಲೋಕದಲ್ಲಿ ಸ್ವರ್ಗವನ್ನು ನೋಡಬೇಕೆಂದಿದ್ದರೆ ಗಿರಿಜನ ಹೆಣ್ಣುಮಕ್ಕಳನ್ನು ನೋಡುವ ಜೀವ, ಜೀವನ ಪ್ರೀತಿಯನ್ನು ಉಳಿಸಿಕೊಳ್ಳದಿದ್ದರೆ ಬದುಕು ಬರಡಾಗುತ್ತದೆ. ಅಗತ್ಯಕ್ಕಿಂತ ಹೆಚ್ಚು ದೇಹ ಮತ್ತು ಬದುಕನ್ನು ಬಗ್ಗಿಸುತ್ತಾ ಹೋದರೆ, ಅದು ಬಾಗದೆ ಉರಿಯುತ್ತದೆ. ಬಾಗುವ ಬಳಕುತನವನ್ನು ಉಳಿಸಿಕೊಳ್ಳುವುದೆಂದರೆ ಮನಸ್ಸನ್ನು ತೆರೆದಿಟ್ಟುಕೊಳ್ಳಬೇಕು. ಅಕಾರಣ ದ್ವೇಷವನ್ನು ಬಿಟ್ಟುಕೊಡುತ್ತಾ ಅಕಾರಣ ಪ್ರೀತಿಯನ್ನು ಹೆಚ್ಚು ಮಾಡಿಕೊಳ್ಳುತ್ತಾ ಹೋಗಬೇಕು.

ಯುಗಾದಿಯ ಹೊತ್ತಿಗೆ ಭೂಮಿ ತನ್ನ ಬರಡುತನವನ್ನೆಲ್ಲಾ ಕಳೆದುಕೊಂಡು ಹೊಸ ಸೃಷ್ಟಿಯೊಂದಿಗೆ ನಮ್ಮನ್ನು ಸೆಳೆಯುತ್ತಿರುತ್ತದೆ. ಇದು ಸಾಧ್ಯವಾಗುವುದು ಕಳೆದುಹೋದದ್ದರ ಬಗ್ಗೆ, ಒಣಗಿ ಉದುರಿ ಹೋದದ್ದರ ಬಗ್ಗೆ ಚಿಂತಿಸುತ್ತಾ ಭವಿಷ್ಯದ ಬದುಕನ್ನು ಬರಡು ಮಾಡಿಕೊಳ್ಳದೆ, ಹೊಸ ಸೃಷ್ಟಿಯ ಬಗೆಗೆ ಕನಸು ಕಾಣುವುದರಿಂದ ಮಾತ್ರ. ಬದುಕೆನ್ನುವುದು ನಮ್ಮ ಮನಸ್ಸಿನ ಪ್ರತಿಬಿಂಬ ಎನ್ನುವುದಾದರೆ, ಅದು ಗತಿಬಿಂಬವಾಗುವುದು ಕಂಡ ಕನಸುಗಳನ್ನು ನನಸು ಮಾಡಿಕೊಳ್ಳಲು ನಾವು ಹವಣಿಸಿದಾಗ ಮಾತ್ರ.

ಶರಣ ಪರಂಪರೆಯಾದರೂ ಬದುಕು ಮತ್ತು ಲೋಕಸಮಸ್ತವನ್ನೂ, ಪ್ರೀತಿಸುವುದನ್ನು, ಗೌರವಿಸುವುದನ್ನೇ ಹೇಳಿಕೊಟ್ಟದ್ದು. ಅಸಂಖ್ಯಾತ ಜೀವಪರಂಪರೆಯ ಈ ಲೋಕದಲ್ಲಿ ವ್ಯರ್ಥ ಜೀವಿ ಯಾವುದೊಂದೂ ಇಲ್ಲ. ಈ ಪರಮ ಸತ್ಯವನ್ನು ಅರ್ಥಮಾಡಿಕೊಂಡರೆ ಜೀವದ ಬಗೆಗೆ ಜೀವನದ ಬಗೆಗೆ ಗೌರವ ತಾನಾಗಿಯೇ ಹುಟ್ಟುತ್ತದೆ.

ಈ ಸಲದ ಮುಖಪುಟವು ಯುಗದ ಆದಿಯನ್ನೂ, ಪ್ರಕೃತಿ ಮತ್ತು ಬದುಕಿನ ನಿತ್ಯನೂತನತೆಯನ್ನೂ ಸಂಕೇತಿಸುತ್ತಿದೆ. ಚೆಲುವಲ್ಲದ ಯಾವುದೂ ಇಲ್ಲ ಪ್ರಕೃತಿಯಲ್ಲಿ. ಜನಪ್ರಿಯ ಸಿನಿಮಾ ಗೀತೆಯೊಂದು ಹೇಳುವಂತೆ 'ಒಲವೇ ಜೀವನ ಸಾಕ್ಷಾತ್ಕಾರ'.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**

**ಗೊರುಚ ಉವಾಚ**

# ಎಲ್ಲರೂ ಹುಚ್ಚರೇ!

**ಒಂ**ದು ಸಣ್ಣ ರಾಜ್ಯದ ರಾಜಧಾನಿ ಪಟ್ಟಣಕ್ಕೆ ಒಮ್ಮೆ ಓರ್ವ ಮಾಟಗಾತಿ ಬಂದು ಆ ಪಟ್ಟಣದ ಒಂದು ಬಾವಿಗೆ ಎಂಥದೋ ಪುಡಿ ಹಾಕಿ ಏನೋ ಮಂತ್ರ ಹೇಳಿದಳು ಮತ್ತು "ಯಾರು ಈ ಬಾವಿಯ ನೀರು ಕುಡಿಯುತ್ತಾರೋ ಅವರು ಹುಚ್ಚರಾಗುತ್ತಾರೆ" ಎಂದು ಬೀದಿ ಬೀದಿಯಲ್ಲಿ ಸಾರುತ್ತ ಹೋದಳು.

ಆ ಪಟ್ಟಣದಲ್ಲಿ ಇದ್ದದ್ದು ಎರಡೇ ಬಾವಿಗಳು. ಒಂದು ಪಟ್ಟಣದ ಸಾಮಾನ್ಯರಿಗಾಗಿ ಮತ್ತು ಇನ್ನೊಂದು ಅರಮನೆಯ ರಾಜ ಮತ್ತು ಪ್ರಧಾನಮಂತ್ರಿಗಳಿಗಾಗಿ ಎಂದು ಕಟ್ಟಳೆ ಮಾಡಲಾಗಿತ್ತು.

ಮಾಟಗಾತಿ ಪುಡಿ ಹಾಕಿದ್ದು ಪಟ್ಟಣದ ಸಾರ್ವಜನಿಕ ಸಾಮಾನ್ಯರ ಬಾವಿಗೆ. ಆಕೆಯ ಮಾತಿನಂತೆ ಆ ಬಾವಿಯ ನೀರನ್ನು ಕುಡಿಯುವವರಿಗೆ ಹುಚ್ಚು ಹಿಡಿಯುತ್ತದೆ ಎಂದಿದ್ದರೂ, ಜನರಿಗೆ ಬೇರೆ ದಾರಿಯಿಲ್ಲದೆ ಆ ಬಾವಿಯ ನೀರನ್ನು ಕುಡಿಯಬೇಕಾಗಿತ್ತು. ಏಕೆಂದರೆ ಅರಮನೆಯ ಬಾವಿಯ ನೀರು ಬಳಸಲು ಅವರಿಗೆ ಅವಕಾಶವಿರಲಿಲ್ಲ.

ಸಾರ್ವಜನಿಕ ಬಾವಿಯ ನೀರು ಕುಡಿದವರು ಒಬ್ಬರಿಗೊಬ್ಬರು ಭೇಟಿಯಾದಾಗ "ನಿನಗೆ ಹುಚ್ಚು ಹಿಡಿದಿದೆಯೇ?" ಎಂದು ಪರಸ್ಪರ ಕೇಳತೊಡಗಿದರು. 'ಇಲ್ಲ' ಎಂದು ಒಬ್ಬರು ಹೇಳಿದರು, ಇನ್ನೊಬ್ಬ "ನೀನು ಸುಳ್ಳು ಹೇಳುತ್ತಿರುವೆ. ಮಾಟಗಾತಿಯ ಮಾತಿನಂತೆ ನಿನಗೆ ಹುಚ್ಚು ಹಿಡಿದಿರಲೇಬೇಕು" ಎನ್ನುತ್ತಿದ್ದ. ಆಗ ಎರಡನೆಯವನು 'ನಾನು ಯಾಕೆ ಸುಳ್ಳು ಹೇಳಲಿ? ನಿಜ ಹೇಳಿದರೂ ನೀನು ನಂಬುತ್ತಿಲ್ಲ ಎಂದರೆ ನಿನಗೆ ಹುಚ್ಚು ಹಿಡಿದಿರಬೇಕು" ಎನ್ನುತ್ತಿದ್ದ. ಹೀಗೆ ಅವರಿಬ್ಬರೂ ಮಾತನಾಡುತ್ತಿದ್ದಾಗ ಅವರಂತೆ ನೀರು ಅದೇ ಬಾವಿ ನೀರು ಕುಡಿದಿದ್ದ ಇನ್ನೂ ಕೆಲವರು ಅಲ್ಲಿ ಸೇರಿದರು. ಅವರದ್ದೂ ಅದೇ ವಿಚಾರ. 'ನಿನಗೆ ಹುಚ್ಚು ಹಿಡಿದಿದೆಯೆ?' ಎಲ್ಲರೂ ಈ ಪ್ರಶ್ನೆ ಕೇಳುವವರೇ. ಆ ಪ್ರಶ್ನೆಗೆ 'ಇಲ್ಲ' ಎನ್ನುವವರೇ ಕೊನೆಗೆ ಅದೊಂದು ದೊಡ್ಡ ಜಗಳವೇ ಆಯಿತು. ಪ್ರತಿಯೊಬ್ಬನೂ 'ನನಗಂತೂ ಹುಚ್ಚು ಹಿಡಿದಿಲ್ಲ. ನಿಮಗೆ ಹಿಡಿದಿದ್ದರೂ ಹಿಡಿದಿರಬಹುದು' ಎಂದು ಕೂಗಾಡತೊಡಗಿದರು. 'ಎಲ್ಲರೂ ನಾನಂತೂ ಹುಚ್ಚನಲ್ಲ' ಎಂದು ದೊಡ್ಡ ದನಿಯಲ್ಲಿ ಕೂಗಿದರು. ಆ ಗದ್ದಲದ ಸದ್ದು ಕೇಳಿ ಊರಿನ ಮಹಿಳೆಯರು ಮಕ್ಕಳು, ಮುದುಕರು ಎಲ್ಲ ಅಲ್ಲಿ ಸೇರಿದರು. ಒಬ್ಬರನ್ನು ನೋಡಿ ಇನ್ನೊಬ್ಬರು 'ನಾನಂತೂ ಹುಚ್ಚನಲ್ಲ' ಎಂದು

೪೦೬, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಶಿಪ್, ೨ನೇ ಹಂತ ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮ ಮೊ : ೯೯೮೦೫೧೨೩೪೯



ಕೂಗಾಡತೊಡಗಿದರು.

ಆ ಕೂಗಾಟ ಎಲ್ಲಿಯವರೆಗೆ ಬಂತೆಂದರೆ, ಸಂಜೆ ಸೂರ್ಯ ಮುಳುಗುವ ಹೊತ್ತಿಗೆ ಇಡೀ ಪಟ್ಟಣದ ಜನ ಹುಚ್ಚರಂತೆ ಕುಣಿದಾಡತೊಡಗಿದರು. ಯಾರು ಯಾರಿಗೂ ಹೇಳುವಂತಿರಲಿಲ್ಲ. ಏಕೆಂದರೆ ಎಲ್ಲರೂ ಹುಚ್ಚಂತಾಗಿದ್ದರು. ಯಾರು ಕಂಡರೂ, ನಾವು ಅವರನ್ನು ಕೇಳುವ ಮುನ್ನವೇ 'ನಾನಂತೂ ಹುಚ್ಚನಲ್ಲ' ಎಂದು ಕೂಗುತ್ತಿದ್ದರು. ಅಷ್ಟೇ ಅಲ್ಲ ಹಾಗೆ ಕೂಗಾಡುತ್ತ ಅಳುತ್ತಿದ್ದರು, ನಗುತ್ತಿದ್ದರು, ತೊಟ್ಟ ಬಟ್ಟೆ ಬಿಚ್ಚಿ ಕುಣಿಯುತ್ತಿದ್ದರು. ಕೆಲವರು ಒಬ್ಬರ ಹೆಗಲಮೇಲೆ ಮತ್ತೊಬ್ಬರು ಕುಳಿತು 'ನಾನು ಹುಚ್ಚನೆ?' ಎಂದರೆ, ಇನ್ನು ಕೆಲವರು "ಇದ್ದರೂ ಇರಬಹುದು. ನಾನಂತೂ ಹುಚ್ಚನಲ್ಲ" ಎಂದು ಕೂಗುತ್ತಿದ್ದರು.

ಹಾಗಾಗಿ ಇಡೀ ನಗರದಲ್ಲಿ ಒಂದು ರೀತಿಯ ಭಯದ ವಾತಾವರಣ ಸೃಷ್ಟಿಯಾಯಿತು. ಯಾರೂ ಮಲಗಲೂ ಸಾಧ್ಯವಾಗಲಿಲ್ಲ. ಆಕಸ್ಮಿಕವಾಗಿ ಯಾರಾದರೂ ಮಲಗಿ ನಿದ್ದೆ ಹೋಗಿದ್ದರೂ, ಅವರನ್ನು ಎಬ್ಬಿಸಿ "ನನಗೆ ಹುಚ್ಚು ಹಿಡಿದಿದೆಯೆ? ನಾನಂತೂ ಹುಚ್ಚನಲ್ಲ" ಎಂದು ಹೇಳುತ್ತಿದ್ದರು. ಅವರ ಕೂಗಾಟ, ಕುಣಿದಾಟಗಳನ್ನು ಕಂಡು ಮಕ್ಕಳು ಬೆದರಿ ಚೀರಾಡತೊಡಗಿದವು. ವಾಸ್ತವವಾಗಿ ಇಡೀ ಪಟ್ಟಣಕ್ಕೆ ಹುಚ್ಚು ಹಿಡಿದಂತಾಗಿತ್ತು. ಏಕೆಂದರೆ ಎಲ್ಲರೂ ಹುಚ್ಚರೇ ಆಗಿದ್ದರು.

ಅರಮನೆಯಲ್ಲಿದ್ದ ರಾಜ ಮತ್ತು ಪ್ರಧಾನಮಂತ್ರಿಗೆ ಸುದ್ದಿ ತಿಳಿಯುವುದು ತಡವಾಗಲಿಲ್ಲ. ಅವರು ಚಿಂತಾಕ್ರಾಂತರಾದರು. ಏನು ಮಾಡುವುದು? ಇಡೀ ಪಟ್ಟಣಕ್ಕೆ ಹುಚ್ಚು ಹಿಡಿದಿದೆ. ಅವರಿಗೂ ಇದರ ಅರಿವಿದ್ದಂತೆ ಕಾಣುವುದಿಲ್ಲ. ಏಕೆಂದರೆ ಎಲ್ಲರೂ ಹುಚ್ಚರಾಗಿದ್ದಾರೆ. ಇದಕ್ಕೆ ಪರಿಹಾರವೇನು? ಹುಚ್ಚರು, ಹುಚ್ಚರಲ್ಲ ಎಂದು ನಿರ್ಣಯಿಸುವುದು ಹೇಗೆ?" ಎಂದು ಅವರಿಬ್ಬರೂ ಚಿಂತಿಸುತ್ತಿದ್ದಂತೆ ಅವರಿಗೆ ತಮ್ಮ ಬಗೆಗೇ ಅನುಮಾನ ಬರತೊಡಗಿತು. ಊರೆಲ್ಲರೂ ಹೀಗೆ ಹುಚ್ಚರಾಗಿದ್ದು, ನಾವಿಬ್ಬರೇ ಸ್ವಸ್ಥರಾಗಿರಲು ಹೇಗೆ ಸಾಧ್ಯ? ನಮಗೂ ಹುಚ್ಚು ಹಿಡಿದಿರಬೇಕು" ಎಂದು ವಿಚಾರ ಮಾಡತೊಡಗಿದರು.

ರಾಜ "ನನಗೆ ಹುಚ್ಚು ಹಿಡಿದಿದೆ ಎಂದು ನಿನಗನಿಸುತ್ತಿದೆಯೆ?" ಎಂದು ಪ್ರಧಾನಿಯನ್ನು ಕೇಳಿದ. ಅದಕ್ಕೆ ಪ್ರಧಾನಿ "ಹಾಗೇನೂ ಕಾಣುತ್ತಿಲ್ಲ" ಎಂದ. ಹಾಗೆಯೇ ಪ್ರಧಾನಿ 'ನನ್ನ ಬಗೆಗೆ ನಿಮಗೆ ಹೇಗೆ ಅನಿಸುತ್ತದೆ? ಎಂದು ಕೇಳಿದ. ಅದಕ್ಕೆ ರಾಜನೂ 'ಹಾಗೇನೂ ಕಾಣುತ್ತಿಲ್ಲ' ಎಂದ. ಆಗ ಇಬ್ಬರೂ ನಾವಂತೂ ಹುಚ್ಚರಲ್ಲ ಎಂದು ಕುಣಿದಾಡತೊಡಗಿದರು. ಇದನ್ನು ತಿಳಿದ ಪಟ್ಟಣದ ಹುಚ್ಚರೆಲ್ಲ ಅರಮನೆ ಬಳಿ ಸೇರಿ, ರಾಜನೂ ಹುಚ್ಚ ಪ್ರಧಾನಿಯೂ ಹುಚ್ಚ. ನಾವಂತೂ ಹುಚ್ಚರಲ್ಲ" ಎಂದು ಮತ್ತಷ್ಟು ಕೂಗಾಡಿ ಕುಣಿದರು.

ಅವರ ಹುಚ್ಚು ಅರಮನೆಯ ಅಂಗರಕ್ಷಕ– ಹಿಡಿದಿತ್ತು. ಅರಮನೆಯ ಅಧಿಕಾರಿಗಳೂ, ಸೈನ್ಯ – ಹೀಗೆ ಎಲ್ಲರಿಗೂ ಹಿಡಿದಿತ್ತು. ಎಲ್ಲರೂ 'ನಾನಂತೂ ಹುಚ್ಚನಲ್ಲ' ಎಂದು ಕೂಗಾಡುವವರೇ ಆಗಿದ್ದರು. ಹಾಗಾಗಿ ಆ ಗುಂಪಿಗೆ ಅರಮನೆಯ ಒಳಗೆ ನುಗ್ಗುವುದು ಕಷ್ಟವಾಗಲಿಲ್ಲ. ಎಲ್ಲರೂ ಒಳನುಗ್ಗಿ 'ರಾಜನಿಗೆ, ನೀನು ಹುಚ್ಚ, ನೀನು ಮೊದಲಿನಂತೆ ಸ್ವಸ್ಥ

ವ್ಯಕ್ತಿಯಾಗದಿದ್ದರೆ ಸಿಂಹಾಸನ ಬಿಟ್ಟು ಕೆಳಗೆ ಇಳಿಯಬೇಕು. ಇಲ್ಲವಾದರೆ ನಾವೇ ಇಳಿಸಬೇಕಾಗುತ್ತದೆ. ನಿಮ್ಮಂತಹ ಹುಚ್ಚರನ್ನು ಆಳಲಿಕ್ಕೆ ಇಟ್ಟುಕೊಳ್ಳಲು ನಾವಂತೂ ಹುಚ್ಚರಲ್ಲ" ಎಂದು ಒಕ್ಕೊರಲಿನಿಂದ ಕೂಗಿದರು.

ರಾಜ ಪ್ರಧಾನಮಂತ್ರಿಯತ್ತ ತಿರುಗಿ, "ಈಗ ಏನು ಮಾಡುವುದು!" ಎಂದ. ಅದಕ್ಕೆ ಪ್ರಧಾನಿ, ನೀವು ಅವರೊಡನೆ ಮಾತನಾಡುತ್ತಿರಿ. ನಾನು ಅಷ್ಟರಲ್ಲಿ ಹೋಗಿ ಆ ಬಾವಿಯಿಂದ ಒಂದು ಕೊಡ ನೀರು ತರುತ್ತೇನೆ. ಈಗ ನಮಗೆ ಬೇರೆ ದಾರಿಯೇ ಇಲ್ಲ. ಇಡೀ ರಾಜಧಾನಿಗೆ ಹುಚ್ಚು ಹಿಡಿದಿರುವಾಗ, ನಾವು ಉಳಿದುಕೊಳ್ಳಬೇಕೆಂದರೆ ನಾವೂ ಅವರಂತೆ ಹುಚ್ಚರಾಗಲೇಬೇಕು" ಎಂದ.

ಇತ್ತ ರಾಜ ಜನರೊಡನೆ ಮಾತನಾಡುತ್ತಿದ್ದಂತೆ ಪ್ರಧಾನಿ ಆ ಬಾವಿಗೆ ಹೋಗಿ ಒಂದು ಕೊಡ ನೀರು ತಂದ. ಆ ಜನರ ಮುಂದೆ ಇಬ್ಬರೂ ನೀರು ಕುಡಿದರು. ನೋಡಿ ಈಗ ನಾವು ಹುಚ್ಚರಾಗಿಲ್ಲ. ನೀವು ಹೇಗೆ ಹುಚ್ಚರಾಗಲು ಸಾಧ್ಯ? ಅವರು ಹೇಳಿದ ಮಾತು ನಿಧಾನವಾಗಿ ಒಬ್ಬೊಬ್ಬರಿಗೇ ಮನವರಿಕೆಯಾಗುತ್ತ ಬಂದಿತು. ಕ್ರಮೇಣ ಕೂಗಾಟ ನಿಂತಿತು. "ಅಂತು ನಾವು ಹುಚ್ಚರಲ್ಲ!" ಎಂದು ಮನಸ್ಸಿನಲ್ಲೇ ಅಂದುಕೊಂಡು ತಮ್ಮ ತಮ್ಮ ಮನೆಗೆ ಹಿಂತಿರುಗಿದ್ದರು. ರಾಜಧಾನಿ ಮತ್ತು ಹಿಂದಿನ ಶಾಂತಸ್ಥಿತಿಗೆ ಮರಳಿತು.

ಈ ಪ್ರಸಂಗವನ್ನು ಅರ್ಥಮಾಡಿಕೊಳ್ಳುವ ಹುಚ್ಚು ನಮಗೆ ಹಿಡಿಯಬೇಕಾಗಿದೆ! □

ಮಕ್ಕಳು ಮರಿಗಳು ಸತ್ತು ನಷ್ಟವಾಗಿ,
ಕಷ್ಟ ದುಃಖ ನೆಲೆಗೊಂಡಿತ್ತೆಂದು
ತನ್ನಿಷ್ಟಲಿಂಗಪೂಜೆಯನಗಲಿಸಿ,
ಬಿಟ್ಟಿಯ ಮಾಡಬಹುದೇನಯ್ಯಾ?
ಜಂಗಮವು ಬಂದು ತನ್ನ ವ್ರತ ನೇಮಕ್ಕೆ ಬೇಡಿದಡೆ
ನಿಮ್ಮ ಉಪದ್ರವೇನೆಂದು ಭಕ್ತಿಯ ಮಾಡಬಹುದೇನಯ್ಯಾ?
ಸಕಲದುಃಖಂಗಳು ತಮ್ಮಿಂದ ತಾವೇ ಬರಲರಿಯವು.
ಭಕ್ತಿಯನ್ನು ಮರೆದು, ಮರವೆಯಲ್ಲಿ ಬೆರೆದು,
ಭವಭವದಲ್ಲಿ ಬರುವುದು ಅದೇ ದುಃಖವು, ನಿಶ್ಚಯವೆಂದಾತ
ನಮ್ಮ ಅಂಬಿಗರ ಚೌಡಯ್ಯ.

– ಅಂಬಿಗರ ಚೌಡಯ್ಯ





# ವೀರಶೈವ ವಚನ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ ನೀಡಿದ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ

ಎಚ್.ಎಸ್. ಸಿದ್ಧಗಂಗಪ್ಪ

ವೀರಶೈವ ಸಾಹಿತ್ಯ ಹಾಗೂ ವಚನಸಾಹಿತ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ ವೀರಶೈವೇತರ ಸಾಹಿತ್ಯ ದಿಗ್ಗಜರುಗಳಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿಯವರೂ ಒಬ್ಬರು ಎಂದು ಹೇಳಲು ಅಭಿಮಾನವಾಗುತ್ತದೆ. ರೆ. ಉತ್ತಂಗಿ ಚೆನ್ನಪ್ಪ, ಡಾ. ರಂಗನಾಥ ರಾಮಚಂದ್ರ ದಿವಾಕರ, ಅನಕೃ ಅವರ ಸಾಲಿನಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿಯವರೂ ಸೇರುತ್ತಾರೆ.

ವಚನಧರ್ಮಸಾರ, ಭಕ್ತಿಭಂಡಾರಿ ಬಸವಣ್ಣನವರು, ಪ್ರಭುಲಿಂಗಲೀಲೆಯ ಸಂಗ್ರಹ, ಚೆನ್ನಬಸವಪುರಾಣ ಸಂಗ್ರಹ ಮೊದಲಾದ ವಿಶಿಷ್ಟ ಗ್ರಂಥಗಳ ಜೊತೆಗೆ ನಾಟಕ, ಕವಿತೆ, ವಿಮರ್ಶೆ, ಮಕ್ಕಳ ಸಾಹಿತ್ಯ, ಶಿಕ್ಷಣ, ನಿಘಂಟು ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಸೇವೆ ಸಲ್ಲಿಸಿದ್ದರೂ, ಅವರ ವಿಶೇಷ ಆಸಕ್ತಿ, ಒಲವು, ವಚನಸಾಹಿತ್ಯ ಹಾಗೂ ವೀರಶೈವ ಸಾಹಿತ್ಯದಲ್ಲಿ. ಏಕೆಂದರೆ ವಚನಸಾಹಿತ್ಯ ಮತ್ತು ವೀರಶೈವ ಸಾಹಿತ್ಯಗಳೆರಡೂ ಕನ್ನಡದ ಪಾಲಿನ ಅಪೂರ್ವ ನಿಧಿಗಳು. ಈ ನಿಧಿಗಳನ್ನು ಕನ್ನಡ ಜನತೆಯ ಹೃನ್ಮನಗಳಿಗೆ ಕರೆದೊಯ್ದು ಭಗೀರಥದಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿ ಅವರು ಅಗ್ರಗಣ್ಯರು ಎಂದು ಹೇಳುವಾಗ, ಅವರು ನೀಡಿದ ಸಾಹಿತ್ಯವನ್ನು ಈ ಮಾತಿನಲ್ಲಿ ಅವಲೋಕಿಸಿದಾಗ ಉತ್ಪ್ರೇಕ್ಷೆಯಿಲ್ಲ ಎಂಬುದು ಸಾಬೀತಾಗುತ್ತದೆ. ಅವರು ಹುಟ್ಟಿನಲ್ಲಿ ತೆಲುಗು ಮಾಧ್ವ ಬ್ರಾಹ್ಮಣರಾದರೂ ತಮ್ಮ ಅಧ್ಯಯನ, ಆಸಕ್ತಿ, ಶ್ರದ್ಧೆಗಳಿಂದ ವೀರಶೈವ ಸಾಹಿತ್ಯ ಮತ್ತು ವಚನಸಾಹಿತ್ಯಗಳತ್ತ ಬೆಳಕು ಬೀರುವ, ಕಣ್ತೆರೆಸುವ ಕೆಲಸ ಮಾಡಿದ್ದಾರೆ. ವಾಗ್ಮಿಗಳಾದ ಎಂ.ಆರ್. ಶ್ರೀನಿವಾಸಮೂರ್ತಿ ಅವರು ವಚನಸಾಹಿತ್ಯದ ಬಗ್ಗೆ, ವೀರಶೈವ ಸಾಹಿತ್ಯ ಬಗ್ಗೆ ಮಾತನಾಡುವಾಗ ಅಲ್ಲಮಪ್ರಭು, ಬಸವಣ್ಣನವರೇ ಅವರ ಮೂಲಕ ಮಾತನಾಡುತ್ತಿದ್ದಾರೇನೋ ಎಂಬಷ್ಟರ ಮಟ್ಟಿಗೆ ಅವರ ವಾಗ್ಝರಿ ಅಮೋಘವಾಗಿರುತ್ತಿತ್ತು. ಅವರು ಅಂತಹ ವಿದ್ವತ್ತಿನ ಗಣಿಯಾಗಿದ್ದರು.

ಜನನ ಮತ್ತು ವೃತ್ತಿ : ಎಂ.ಆರ್. ಶ್ರೀನಿವಾಸಮೂರ್ತಿಯವರು ಹುಟ್ಟಿದ್ದು ಹಾಸನದಲ್ಲಿ, ಆಗಸ್ಟ್ ೨೮, ೧೮೯೨ ರಂದು. ತಂದೆ ರಾಮಚಂದ್ರ ರಾವ್, ತಾಯಿ ಸಾವಿತ್ರಮ್ಮ ಅವರ ಎರಡನೇ ಮಗನಾಗಿ ಜನಿಸಿದ ಅವರು ೧೯೧೫ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಪದವೀಧರರಾದರು. ೧೯೧೬ರಲ್ಲಿ ಹಂಗಾಮಿ ಶಿಕ್ಷಕರಾಗಿ ವೃತ್ತಿಜೀವನವನ್ನು ಆರಂಭಿಸಿದ ಅವರು ನಾಲ್ಕು ದಶಕಗಳ ಸುದೀರ್ಘಕಾಲ ವೃತ್ತಿಜೀವನವನ್ನು ಶ್ರದ್ಧೆ, ನಿಷ್ಠೆ,

ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೮ನೆ ಬ್ಲಾಕ್, ವಿಶ್ವನೀಡಂ ಅಂಚೆ, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧ ೯೮೪೫೫ ೬೫೮೭೧

ಬದ್ಧತೆ, ಪ್ರಾಮಾಣಿಕತೆಯಿಂದ ನಡೆಸಿ ೧೯೬೨ರಲ್ಲಿ ಜಿಲ್ಲಾ ಶಿಕ್ಷಣಾಧಿಕಾರಿಯಾಗಿ ನಿವೃತ್ತರಾದರು. ಅವರು ತಮ್ಮ ಸೇವಾವಧಿಯಲ್ಲಿ ಶಾಲಾ ತನಿಖಾಧಿಕಾರಿಯಾಗಿ, ನಾರ್ಮಲ್ ಸ್ಕೂಲ್ ಮುಖ್ಯೋಪಾಧ್ಯಾಯರಾಗಿ, ಎಸ್.ಜೆ. ಪಾಲಿಟೆಕ್ನಿಕ್‌ನಲ್ಲಿ ವಿಜ್ಞಾನ ಬೋಧಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟಿನ ಸಹಾಯಕ ಸಂಪಾದಕರಾಗಿ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟ ಕೀರ್ತಿಗೆ ಭಾಜನರಾಗಿದ್ದರು.

ಗ್ರಂಥಸಂಪಾದನೆ : ಎಂ.ಆರ್. ಶ್ರೀನಿವಾಸಮೂರ್ತಿಯವರದು ಬಹುಮುಖ ಪ್ರತಿಭೆ. ಅವರು ಶ್ರೇಷ್ಠ ಗ್ರಂಥಸಂಪಾದಕರಾಗಿದ್ದರಲ್ಲದೆ, ಉತ್ತಮ ವಿಮರ್ಶಕರೂ ಆಗಿದ್ದರು. ಅವರು ಸಂಪಾದಿಸಿ ಪ್ರಕಟಿಸಿದ 'ಪ್ರಭುಲಿಂಗಲೀಲೆಯ ಕಾವ್ಯಸಂಗ್ರಹ' ಹಾಗೂ 'ಚನ್ನಬಸವ ಪುರಾಣ ಕಾವ್ಯಸಂಗ್ರಹ' ಮಹತ್ವಪೂರ್ಣ ಸಂಪಾದಿತ ಗ್ರಂಥಗಳೆಂಬ ಹೆಗ್ಗಳಿಕೆ ಪಾತ್ರವಾಗಿವೆ. ಅವುಗಳ ಜೊತೆಗೆ ಬಸವಪುರಾಣ ಸಂಗ್ರಹ, ಶಬರಶಂಕರವಿಳಾಸ ಸಂಗ್ರಹ, ರಾಜಶೇಖರ ವಿಳಾಸ ಸಂಗ್ರಹ ಮೊದಲಾದ ಸಂಗ್ರಹ ಆವೃತ್ತಿಗಳನ್ನು ಅವರು ಸಂಪಾದಿಸಿದ್ದರು. ಈ ಪೂರ್ಣ ಕಾವ್ಯಗಳನ್ನು ಕವಿಯ ವಿವರ ಹಾಗೂ ಪೀಠಿಕೆಯೊಂದಿಗೆ ಪರಿಷ್ಕರಿಸಿ ಪ್ರಕಟಣೆಗೆ ಸಿದ್ಧಪಡಿಸಿದ್ದರು. ಇವುಗಳಲ್ಲದೆ ಹರಿಹರ, ಚತುರ್ಮುಖ ಬೊಮ್ಮರಸ, ಸರ್ವಜ್ಞ, ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ನಿಜಗುಣ ಶಿವಯೋಗಿಗಳ ಏಳು ಕಾವ್ಯಗಳು, ವೀರಶೈವಾಮೃತ ಪುರಾಣ, ಗುರುರಾಜಚರಿತ್ರೆ, ಶಿವತತ್ತ್ವ ಚಿಂತಾಮಣಿ, ರಾಘವಾಂಕನ ಕಾವ್ಯ ಮೊದಲಾದ ವೀರಶೈವ ಕಾವ್ಯಗಳನ್ನು ಸಮಗ್ರವಾಗಿ, ಸಮರ್ಪಕವಾಗಿ ಸಂಪಾದಿಸಿದ್ದರು. ವೀರಶೈವ ಸಾಹಿತ್ಯಚರಿತ್ರೆಯನ್ನು ಸಂಪೂರ್ಣ ರಚಿಸುವ ಉದ್ದೇಶದಿಂದ ಎಲ್ಲ ವೀರಶೈವ ಕಾವ್ಯಗಳ ಪಾಲಿಗೆ ತಲಸ್ಪರ್ಶಿ ಅಧ್ಯಯನ ಮಾಡಿದ್ದರು. ಆದರೆ ಅವರ ಆಸೆ ಈಡೇರದೆ ಇದ್ದುದ್ದು ಬಹು ದೊಡ್ಡ ನಷ್ಟ.

ವಚನಸಾಹಿತ್ಯದ ಬಗ್ಗೆ ಸಮಗ್ರ ಕನ್ನಡ ಸಾಹಿತ್ಯದ ಅಧ್ಯಯನ ಮಾಡಿ ಅದರ ಬಗ್ಗೆ ಅಪಾರ ಗೌರವ, ಅಭಿಮಾನವನ್ನು ಹೊಂದಿದ್ದ ಎಂ.ಆರ್. ಶ್ರೀನಿವಾಸಮೂರ್ತಿಯವರು ಅದಕ್ಕೆ ನಿದರ್ಶನವಾಗಿ ೧೯೫೦ರಲ್ಲಿ ಸಿದ್ಧರಾಮ ಕ್ಷೇತ್ರವಾದ ಸೊಲ್ಲಾಪುರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಹೇಳಿದ ಮಾತುಗಳು ಗಮನಾರ್ಹವಾಗಿವೆ.

"ಕನ್ನಡಕ್ಕೆ ವಿಶಿಷ್ಟ ಲಕ್ಷಣವಾಗಿರುವ ವಚನಸಾಹಿತ್ಯವನ್ನು ಶರಣರು ನಮಗೆ ರಚನೆ ಮಾಡಿಕೊಟ್ಟಿದ್ದಾರೆ. ಸಾಹಿತ್ಯದೇವಿಯ ತಪೋಭೂಮಿಯಲ್ಲಿ ಅನುಭವಮಂಟಪ ಪ್ರಕಾಶಿಸುತ್ತಿದೆ. ಇತರ ಸಾಹಿತ್ಯಗಳಲ್ಲಿ ಇದಕ್ಕೆ ಸಂವಾದಿಯಾದುದನ್ನು ತೋರಿಸಿಕೊಡಲಿ" ಎಂದು ಹೇಳಿರುವ ಅವರ ಮಾತುಗಳು ವಚನಸಾಹಿತ್ಯದ ನೈಜ ಮೌಲ್ಯವನ್ನು ಪ್ರತಿಪಾದಿಸುತ್ತದೆ.

ಎಂ.ಆರ್. ಶ್ರೀನಿವಾಸಮೂರ್ತಿಯವರು ಈಗಾಗಲೇ ಪ್ರಸ್ತಾಪಿಸಿದಂತೆ ಉತ್ತಮ ವಾಗ್ಮಿಗಳಾಗಿದ್ದರು. ಅವರು ಉಪನ್ಯಾಸಕ್ಕೆ ನಿಂತರೆ ಇಡೀ ಸಭೆಯೇ ಸ್ತಬ್ಧವಾಗುತ್ತಿತ್ತು. ಕೇಳುಗರಿಗೆ ರಸದೌತಣ ಬಡಿಸಿದಂತಿರುತ್ತಿತ್ತು. ರನ್ನ, ಬಸವಣ್ಣ, ಕುಮಾರವ್ಯಾಸ ಯಾರೇ





ಇರಲಿ ಅವರ ಬಗ್ಗೆ, ಅವರ ಕೃತಿಗಳ ಬಗ್ಗೆ ಮಾತನಾಡಲು ನಿಂತರೆ ಸಾಕ್ಷಾತ್ ವಾಗ್ದೇವಿಯೇ ಅವರ ನಾಲಿಗೆಯ ಮೇಲೆ ನಲಿದು ನರ್ತಿಸುತ್ತಿದ್ದಳು. ಅವರ ಸ್ಮರಣಶಕ್ತಿ ಅದ್ಭುತವಾಗಿತ್ತು. ಕಾದಂಬರಿ ಸಾರ್ವಭೌಮ ಅನಕೃ ಅವರು "ಕನ್ನಡ ನಾಡಿನ ಪುಸ್ತಕಭಂಡಾರಗಳಲ್ಲಿರುವ ವೀರಶೈವ ಸಾಹಿತ್ಯ ಗ್ರಂಥಗಳೆಲ್ಲಾ ನಶಿಸಿ ಹೋದರೂ ಎಂ.ಆರ್. ಶ್ರೀನಿವಾಸಮೂರ್ತಿಯವರು ಒಬ್ಬರಿದ್ದರೆ ಸಾಕು, ಅವನ್ನು ಪುನರುಜ್ಜೀವನಗೊಳಿಸಬಹುದು" ಎಂದು ಹೇಳಿದರೆ, ವಿದ್ವತ್ತಿನ ಗಣಿಯಾಗಿದ್ದ ಪ್ರೊ.ಎಲ್. ನರಸಿಂಹಾಚಾರ್ಯರು "ಸಮಗ್ರ ವಚನಸಾಹಿತ್ಯ ಯಾವ ಕಾರಣದಿಂದಲಾದರೂ ನಮ್ಮ ಕೈತಪ್ಪಿಹೋದರೆ ಅದನ್ನು ಸಂಪೂರ್ಣವಾಗಿ ಉಳಿಸುವ ನೆನಪು ಅವರದಾಗಿತ್ತು" ಎಂದು ಶ್ಲಾಘಿಸಿದರೆ, ಡಿ.ವಿ.ಜಿ. ಯವರು "ಸಾವಿರಾರು ವಚನಗಳು ಅವರಿಗೆ (ಎಂ.ಆರ್. ಶ್ರೀ) ಮುಖಸ್ಥವಾಗಿದ್ದವು" ಎಂದಿದ್ದಾರೆ. ಇಂಥವರಿಗೆ 'ವಚನವಾಙ್ಮಯ ವಿಶಾರದ" ಎಂಬ ಪ್ರಶಸ್ತಿ ದೊರಕಿದ್ದು ಅವರ ವಿದ್ವತ್ತಿಗೆ ಸಂದ ಮಹೋನ್ನತ ಗೌರವವಾಗಿದೆ.

ಎಂ.ಆರ್. ಶ್ರೀನಿವಾಸಮೂರ್ತಿಯವರು ನಮಗೆ ಕೊಟ್ಟು, ಬಿಟ್ಟು ಹೋದ ಸಾಹಿತ್ಯವೆಲ್ಲವೂ ಮೌಲಿಕವಾದವುಗಳೆ. ಆದರೆ ಅವರಿಗೆ ಖ್ಯಾತಿಯನ್ನು ತಂದುಕೊಟ್ಟ ಕೃತಿಗಳಲ್ಲಿ 'ವಚನಧರ್ಮಸಾರ' ಪ್ರಮುಖವಾದುದು. ವಚನಾವಲೋಕನದ ಹಲವು ಸಮಗ್ರ ಕೃತಿಗಳು ಬಂದಿದ್ದರೂ, 'ವಚನಧರ್ಮಸಾರ' ಇಂದಿಗೂ ಮೇರುಕೃತಿಯಾಗಿ, ದಾರಿದೀಪದಂಥ ಕೃತಿಯಾಗಿ ವಿದ್ವಾಂಸರ ಗಮನವನ್ನು ಸೆಳೆದಿದೆ. ಏಕೆಂದರೆ ವಚನಸಾಹಿತ್ಯ ಪ್ರವೇಶಕ್ಕೆ ಅದರ ನಿಷ್ಪಕ್ಷಪಾತ ವಿಮರ್ಶೆಗೆ, ತಲಸ್ಪರ್ಶಿ ಅಧ್ಯಯನಕ್ಕೆ ತಕ್ಕಂಥ ಕೃತಿಯಾಗಿದೆ.

'ವಚನಧರ್ಮಸಾರ'ವನ್ನು ಏಕೆ ಬರೆದೆ ಎಂಬುದನ್ನು ಎಂ.ಆರ್. ಶ್ರೀನಿವಾಸಮೂರ್ತಿ ಅವರೇ ಪೀಠಿಕೆಯಲ್ಲಿ "ಸಾಮಾನ್ಯ ಜನರ ದೃಷ್ಟಿಯಿಂದ ಈ ಗ್ರಂಥವನ್ನು ಬರೆಯಲಾಗಿದೆಯೇ ಹೊರತು ಸಿದ್ಧಾಂತಪ್ರತಿಪಾದನೆಯ ಪಂಡಿತರ ದೃಷ್ಟಿಯಿಂದ ಇದನ್ನು ಬರೆದಿಲ್ಲ. ದೇವರು, ಭಕ್ತಿ, ಜ್ಞಾನ ಮೊದಲಾದ ವಿಚಾರಗಳಲ್ಲಿ ವಚನಕಾರರು ಯಾವ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದ್ದಾರೆ ಎಂಬುದನ್ನೂ ಸಮಾಜರಚನೆಯನ್ನು ಅವರು ಹೇಗೆ ಉದ್ದೇಶಿಸಿದ್ದಾರೆ ಎಂಬುದನ್ನು ತೋರಿಸುವುದಕ್ಕೆ ಈ ಗ್ರಂಥದಲ್ಲಿ ಪ್ರಯತ್ನಪಟ್ಟಿದೆ" ಎಂದು ತಮ್ಮ ಮನದಾಳದ ಮಾತುಗಳನ್ನು ಹೀಗೆ ಹೇಳಿಕೊಂಡಿದ್ದಾರೆ.

ಮನಸೆಳೆಯುವ ಶೈಲಿಯ ದೃಷ್ಟಿಯಿಂದ 'ವಚನ ಧರ್ಮಸಾರ' ಕೃತಿ ವಿಶಿಷ್ಟವಾಗಿದೆ. ಇಲ್ಲಿನ ಚೇತೋಹಾರಿ ನಿರೂಪಣೆ, ಸರಳ ಭಾಷೆ, ಖಚಿತಾಭಿಪ್ರಾಯ, ನಿಷ್ಪಕ್ಷಪಾತ ತೌಲನಿಕ ದೃಷ್ಟಿ ಮೆಚ್ಚುವಂಥದು. ಅವರು ಗ್ರಂಥಾರಂಭದಲ್ಲಿ ವ್ಯಕ್ತಪಡಿಸಿರುವ ಆಡಿರುವ ಮಾತುಗಳೇ ಓದುಗರಿಗೆ ಅಪೂರ್ವ ಅನುಭವ ನೀಡುತ್ತಾ ವಿಷಯ ಪ್ರವೇಶ ಮಾಡಿಸುತ್ತದೆ. "ಕನ್ನಡ ಸಾಹಿತ್ಯಪ್ರಪಂಚದಲ್ಲಿ ವಿಹರಿಸುತ್ತ ಬರುವಾಗ ಒಂದು ಕಡೆ ತಪೋವನವನ್ನು ಪ್ರವೇಶಿಸಿದಂತೆಯೂ, ಸಿದ್ಧ ಸಾಧಕ ಋಷಿಗಳ ಸಂದರ್ಶನ ಪಡೆದು ಅವರ ಉದಾತ್ತ ಜೀವಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮಬಂಧನಗಳು ಕಳಚಿಬಿದ್ದು ನಾವು ಮುಕ್ತವಾದಂತೆಯೂ ಒಂದು ದಿವ್ಯವಾದ ಆನಂದಾನುಭವ ಉಂಟಾಗುತ್ತದೆ.

ಇಲ್ಲಿ ಪಟ್ಟಣವಾಸದ ಗೊಂದಲವಿಲ್ಲ; ರಾಜಾಸ್ಥಾನದ ವೈಭವ ದೃಶ್ಯಗಳಿಲ್ಲ. ತಪೋವನದ ಸಹಜ ಶಾಂತಿ, ಪರಸ್ಪರ ಪ್ರೇಮ, ಸಮತಾಭಾವ, ಸ್ವಾತಂತ್ರ್ಯ ಇವುಗಳನ್ನು ಮೂರ್ತಿವತ್ತಾಗಿ ಕಾಣುತ್ತೇವೆ. ವಚನ ಸಾಹಿತ್ಯವೇ ತಪೋವನದ ಈ ಉಪನಿಷತ್ಸಾಹಿತ್ಯ. ವಚನಕಾರರೇ ಉಪನಿಷತ್‌ಕರ್ತೃಗಳಾದ ಮಹರ್ಷಿಗಳು. ಉಪನಿಷತ್‌ಗಳ ಆಧಾರದಿಂದ ಹೇಗೆ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆಯೋ ಹಾಗೆಯೇ ವಚನಸಾಹಿತ್ಯದಿಂದಲೂ ವಿವಿಧ ಸಿದ್ಧಾಂತಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆ. ವೈಯಕ್ತಿಕ ಮನೋಭಾವ, ಅಂತರಂಗದ ಹೋರಾಟ, ಧರ್ಮಬೋಧೆ, ಹೃದಯದಿಂದ ಹೊರಟು ನೇರವಾಗಿ ಹೃದಯವನ್ನು ಮುಟ್ಟುವ ಸರಳ ಶೈಲಿ, ಇವುಗಳು ವಚನಗಳಲ್ಲಿರುವುದರಿಂದ ಈ ಸಾಹಿತ್ಯದಲ್ಲಿ ಜೀವನಕಳೆ ಇದೆ ಮತ್ತು ಈ ಸಾಹಿತ್ಯ ಅಮೂಲ್ಯವಾಗಿದೆ" ಎಂ.ಆರ್. ಶ್ರೀನಿವಾಸಮೂರ್ತಿಯವರು ವಚನಸಾಹಿತ್ಯವನ್ನು ಮೆಚ್ಚಿಕೊಂಡು ಈ ನಿಟ್ಟಿನಲ್ಲಿ ಕೆಲಸ ಮಾಡಲು ಸಾಧ್ಯವಾಗಿದೆ.

'ವಚನಧರ್ಮಸಾರ' ಸಾರ್ವಕಾಲಿಕವಾಗಿ ಮನಮುಟ್ಟುವ ಗ್ರಂಥವಾಗಿರುವುದಕ್ಕೆ ಕಾರಣ ಎಂ.ಆರ್. ಶ್ರೀನಿವಾಸಮೂರ್ತಿಯವರು ಆಧುನಿಕ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳನ್ನು ಮುಕ್ತವಾಗಿ ಒಪ್ಪಿಕೊಂಡು 'ವಚನ ಸಾಹಿತ್ಯವೂ ಸ್ತ್ರೀಯೂ' ಅಧ್ಯಾಯದಲ್ಲಿ ಮಾರ್ಮಿಕವಾಗಿ ನಿರೂಪಿಸಿರುವುದು. ಅವರು ತಮ್ಮ ಅಭಿಪ್ರಾಯಗಳನ್ನು ಹೀಗೆ ಹೇಳಿದ್ದಾರೆ. "ವಚನಧರ್ಮದಲ್ಲಿ ಸ್ತ್ರೀಯರಿಗೆ ಪುರುಷರಂತೆಯೇ ಸಮಾನವಾದ ಹಕ್ಕುಗಳು ಗೌರವವುಂಟು." ಶಿವಶರಣೆಯರ ಜ್ಞಾನ, ಸಂಸ್ಕೃತ, ಸೌಜನ್ಯ ಮೊದಲಾದವುನ್ನು ನೋಡಿದರೆ ನಮ್ಮ ಮನಸ್ಸು ವೇದೋಪನಿಷತ್ತುಗಳ ಕಾಲಕ್ಕೆ ಹೋಗುತ್ತದೆ. ಗಾರ್ಗಿ, ಮೈತ್ರೇಯಿ ಮೊದಲಾದವರು ಜ್ಞಾಪಕಕ್ಕೆ ಬರುತ್ತದೆ. "ಗಂಡು ಹೆಚ್ಚು ಹೆಣ್ಣು ಕಡಿಮೆ ಎಂದು ಹೆಣ್ಣನ್ನು ಅಲ್ಲಗಳೆಯಲಾಗದು. ಸ್ತ್ರೀದೇಹಧಾರಿಗೂ, ಮೋಕ್ಷವುಂಟು, ಲಿಂಗೈಕ್ಯವುಂಟು" ಎಂದು ವಚನಧರ್ಮ ಹೇಳುತ್ತದೆ ಎಂದಿದ್ದಾರೆ. "ತಾಯಿ ದೇವರೆಂದು ವೇದ ಹೇಳಿತು. ಹೆಣ್ಣೇ ದೇವರೆಂದು ವಚನಧರ್ಮ ಸಾರಿತು" ಈ ಒಂದು ಮಾತಿನಲ್ಲಿ ಸೂಕ್ತಿಪ್ರಾಯವಾಗಿ ಎಂ.ಆರ್. ಶ್ರೀನಿವಾಸಮೂರ್ತಿಯವರು ಇಡೀ ವಚನಸಾಹಿತ್ಯದಲ್ಲಿ ಸ್ತ್ರೀಗೆ ದೊರೆತ ಸ್ಥಾನಮಾನಗಳನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ವಚನ ಧರ್ಮಸಾರ ಜನಸಾಮಾನ್ಯರ ಭಗವದ್ಗೀತೆ ಎಂಬ ಮಾತು ಅರ್ಥಪೂರ್ಣವಾಗಿ ಅದಕ್ಕೆ ಹೀಗೆ ಸಾರ್ವಕಾಲಿಕ ಮೌಲ್ಯ ಲಭ್ಯವಾಗಿದೆ.

ಎಂ.ಆರ್. ಶ್ರೀನಿವಾಸಮೂರ್ತಿಯವರ ಮತ್ತೊಂದು ಮೇರುಕೃತಿ "ಭಕ್ತಿ ಭಂಡಾರಿ ಬಸವಣ್ಣನವರು". ಕನ್ನಡದಲ್ಲಿ ಬಸವಣ್ಣನವರ ಜೀವನ, ಸಾಧನೆಗಳನ್ನು ಚಿತ್ರಿಸುವ ನೂರಾರು ಗ್ರಂಥಗಳು ಬಂದಿವೆ. ಬರುತ್ತಲೇ ಇವೆ. ಅಂತಹ ಕೃತಿಗಳಲ್ಲಿ ಪ್ರಮುಖವಾಗಿ ಪ್ರಭುಶಂಕರ ಅವರ 'ಬೆರಗು' ಹಾಗೂ ಡಾ. ಎಂ. ಚಿದಾನಂದಮೂರ್ತಿಯವರ 'ಬಸವಣ್ಣನವರು' ಮೊದಲಾದ ಕೃತಿಗಳನ್ನು ಹೆಸರಿಸಬಹುದು. ಈ ಸಾಲಿನಲ್ಲಿ ಬರುವ ಮಹತ್ವಪೂರ್ಣವಾದ ಕೃತಿಯೆಂದರೆ ಎಂ.ಆರ್. ಶ್ರೀನಿವಾಸಮೂರ್ತಿ ಅವರ 'ಭಕ್ತಿಭಂಡಾರಿ ಬಸವಣ್ಣ'. ಈ ಗ್ರಂಥದಲ್ಲಿ ಬಸವಣ್ಣನವರ ವಚನಗಳ ಆಧಾರದ ಮೇಲೆ ಅವರ ಸಾಧನೆಸಿದ್ಧಿಗಳನ್ನು,





ವ್ಯಕ್ತಿತ್ವವನ್ನು ಎಂ.ಆರ್. ಶ್ರೀನಿವಾಸಮೂರ್ತಿಯವರು ನಿರೂಪಿಸುತ್ತಾ ಹೋಗುತ್ತಾರೆ. ಪುಟಪುಟದಲ್ಲೂ ಮಾತುಮಾತಿಗೂ ವಚನಗಳನ್ನು ಉಲ್ಲೇಖಿಸುತ್ತಾ ಹೋಗುತ್ತಾರೆ. ವಚನಧರ್ಮಸಾರದಲ್ಲಿ ಬಸವಣ್ಣನವರ ಸಂಕ್ಷಿಪ್ತ ಚಿತ್ರ ಕಂಡರೆ ಇಲ್ಲಿ ಸಮಗ್ರ ಚಿತ್ರ ದೊರಕುತ್ತದೆ.

ಎಂ.ಆರ್. ಶ್ರೀನಿವಾಸಮೂರ್ತಿಯವರು ಭಕ್ತಿ ಭಂಡಾರಿ ಬಸವಣ್ಣನವರ ಜೀವನಚರಿತ್ರೆಯನ್ನು ಜನಪದ ದೃಷ್ಟಿಯಿಂದ ಬರೆದರು ಎಂಬುದು ಮುಖ್ಯವಾದ ಅಂಶ ವಚನಸಾಹಿತ್ಯವನ್ನು ಕುರಿತು ಶಿಷ್ಟ ಪರಂಪರೆಯ ದೃಷ್ಟಿಯನ್ನು ಎಂ.ಆರ್. ಶ್ರೀನಿವಾಸಮೂರ್ತಿ ಅವರು ಈ ಗ್ರಂಥದಲ್ಲಿ ಅಳವಡಿಸಿದ್ದಾರೆ ಎಂಬುದು ಗಮನಿಸಬೇಕಾದ ಸಂಗತಿ. ಅವರೇ ಹೇಳಿರುವಂತೆ "ಸಾರ್ವಜನಿಕ ಜೀವನವನ್ನು ಸತ್ಯಮಾರ್ಗದಲ್ಲಿ ಹರಿಸಿ ಸತ್ವಮಯವನ್ನಾಗಿ ಮಾಡಲು ಪ್ರಯತ್ನಪಟ್ಟರೆ ಈ ಪ್ರಯತ್ನದ ರೀತಿ, ಬಂದ ತೊಡರುಗಳು, ದೊರೆತ ಫಲ, ಈ ಹೋರಾಟದಲ್ಲಿ ಬಸವಣ್ಣನವರ ಚಿತ್ತವೃತ್ತಿ – ಇವುಗಳನ್ನು ಲೌಕಿಕ ದೃಷ್ಟಿಯಿಂದ ನಾನು ನೋಡಿ ಪುಸ್ತಕ ಬರೆದಿದ್ದೇನೆ" ಎಂದಿದ್ದಾರೆ. ಈ ಲೌಕಿಕ ದೃಷ್ಟಿಯನ್ನೇ ಮುಂದೆ ಬಂದ ಲೇಖಕರು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡು ರಚಿಸಿರುವುದನ್ನು ಗಮನಿಸಿದರೆ ಎಂ.ಆರ್. ಶ್ರೀನಿವಾಸಮೂರ್ತಿಯವರು ಈ ಗ್ರಂಥದ ಮೂಲಕ ಹಾಗೂ ವಚನಧರ್ಮಸಾರದ ಮೂಲಕ ಒಂದು ಹೊಸ ವಿನ್ಯಾಸದ ಗ್ರಂಥಗಳನ್ನು ರಚಿಸಿ ಸಾಹಿತ್ಯಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಇದರ ಜೊತೆಗೆ ಎಂ.ಆರ್. ಶ್ರೀನಿವಾಸಮೂರ್ತಿಯವರು ಒಬ್ಬ ಸೃಜನಶೀಲ ಲೇಖಕರೂ ಆಗಿದ್ದರು. ಸಾವಿತ್ರಿ, ಮಹಾತ್ಯಾಗಿ, ರಂಗಣ್ಣನ ಕನಸಿನ ದಿನಗಳು ಮುಂತಾದ ಕಾದಂಬರಿಗಳನ್ನು ಕವಿಯ ಸೋಲು ಕವನ ಸಂಕಲನ ಕಂಠೀರವ ವಿಜಯ, ನಾಗರಿಕ ಮೊದಲಾದ ನಾಟಕಗಳು ಸ್ಕೌಟುಗಳ ಕೈಪಿಡಿ, ಉಪಾಧ್ಯಾಯರ ಆರೋಗ್ಯಶಾಸ್ತ್ರ ಮೊದಲಾದ ಗ್ರಂಥಗಳು ಕನ್ನಡ ಒಂದನೆಯ ಪುಸ್ತಕ, ಎರಡನೆಯ ಪುಸ್ತಕ, ಮೆಕ್ಮಿಲನ್ ಬಾಲಬೋಧೆ, ವಯಸ್ಕರ ಶಿಕ್ಷಣ, ಅಕ್ಷರ ಕಲಿಕೆ, ಮಕ್ಕಳ ಪುಸ್ತಕಗಳು, ಇಂಗ್ಲಿಷ್–ಕನ್ನಡ ನಿಘಂಟಿನ ಕಾರ್ಯದರ್ಶಿ – ಹೀಗೆ ಬಹುಮುಖ ಪ್ರತಿಭಾಶಾಲಿಗಳಾಗಿದ್ದರು. "ವಿದ್ಯುಚ್ಛಕ್ತಿ" ಗ್ರಂಥ, ವಿಜ್ಞಾನ ಶಿಕ್ಷಕರು ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸಾಹಿತ್ಯ ಸಂಘಟನೆಯಲ್ಲೂ ಕ್ರಿಯಾಶೀಲವಾಗಿದ್ದರು.

ಅವರು ತಮ್ಮ ಜೀವನದಲ್ಲಿ ಶಿಸ್ತು, ಬದ್ಧತೆಯನ್ನು ಅಳವಡಿಸಿಕೊಂಡಿದ್ದರು. ಕರ್ತವ್ಯನಿಷ್ಠೆ ಅವರ ಬದುಕಿನ ಅವಿಭಾಜ್ಯ ಅಂಗವಾಗಿತ್ತು. ಇದಕ್ಕೆ ಒಂದು ನಿದರ್ಶನವೆಂದರೆ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಒಂದು ಸಂಗೀತ ಕಾರ್ಯಕ್ರಮ ಏರ್ಪಡಿಸಿದ್ದರು. ಆಗ ಅಲ್ಲಿ ಸಾಕಷ್ಟು ಕುರ್ಚಿಗಳಿರಲಿಲ್ಲ. ಸಭಾಂಗಣದಲ್ಲಿ ಜಮಖಾನ ಹಾಸಿ, ಪುರುಷರು, ಸ್ತ್ರೀಯರು ಪ್ರತ್ಯೇಕವಾಗಿ ಕುಳಿತುಕೊಳ್ಳಲು ಮಧ್ಯೆ ಎರಡು ಚಿಕ್ಕ ಸ್ಕ್ರೀನ್‌ಗಳನ್ನು ಅಡ್ಡ ಇಡುತ್ತಿದ್ದರು. ಆ ದಿನ ವ್ಯವಸ್ಥೆ ಮಾಡಲು ನೇಮಕವಾಗಿದ್ದ ಜವಾನ ತಡವಾಗಿ ಬಂದ. ವ್ಯವಸ್ಥೆ ಮಾಡುವಲ್ಲಿ ಏರುಪೇರಾಗಬಾರದೆಂದು ಭಾವಿಸಿದ ಎಂ.ಆರ್. ಶ್ರೀನಿವಾಸಮೂರ್ತಿಯವರು ಮುಂಚಿತವಾಗಿ ಬಂದಿದ್ದ ಕೆಲವರ ಸಹಕಾರದಿಂದ

ಕಾರ್ಯಕ್ರಮದ ಸಿದ್ಧತೆ ಪೂರೈಸಿದರು. ಆ ವೇಳೆಗೆ ಬಂದ ಜವಾನ್ "ತಪ್ಪಾಯಿತು ಸ್ವಾಮಿ, ತಡವಾಯಿತು" ಎಂದ. ಎಂ.ಆರ್. ಶ್ರೀನಿವಾಸಮೂರ್ತಿಯವರು "ನೋಡಯ್ಯ ಪರಿಷತ್ತಿನಲ್ಲಿ ನೀನು ಚಿಕ್ಕ ಜವಾನ, ನಾನು ದೊಡ್ಡ ಜವಾನ. ವ್ಯವಸ್ಥೆಯಲ್ಲಿ ಏರುಪೇರಾದರೆ ನಿನ್ನನ್ನು ಯಾರೂ ಕೇಳುವುದಿಲ್ಲ. ನನ್ನನ್ನು, ದೊಡ್ಡ ಜವಾನನನ್ನು ಕೇಳ್ತಾರೆ" ಎಂದರು. ಅಂದಿನಿಂದ ಅವರು ಅಧಿಕಾರವಿದ್ದಷ್ಟು ಕಾಲ ಆ ಜವಾನ ಎಂದು ತಡವಾಗಿ ಬರಲಿಲ್ಲ. ಅವರು ಪರಿಷತ್ತಿನ ಕಛೇರಿಗೆ ಪ್ರವೇಶಿಸುವಾಗ ಪಾದರಕ್ಷೆಗಳನ್ನು ಹೊರಗೇ ಬಿಡುತ್ತಿದ್ದರು. ಸಾಹಿತ್ಯ ಪರಿಷತ್ತು ಶಾರದೆಯ ದೇಗುಲ, ತಾವೆಲ್ಲ ಅಲ್ಲಿ ಸೇವೆ ಮಾಡುವ ಭಕ್ತರು" ಎಂದು ತಿಳಿದಿದ್ದರು. ಇದು ಅವರ ಸರಳತೆ, ಸಜ್ಜನಿಕೆಗೆ ಹಿಡಿದ ಕನ್ನಡಿ.

ಅರವತ್ತೊಂದು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ಅಮೂಲ್ಯ ಕೃತಿಗಳನ್ನು ನೀಡಿ, ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಎಂ.ಆರ್. ಶ್ರೀನಿವಾಸಮೂರ್ತಿಯವರು ಸೆಪ್ಟೆಂಬರ್ ೧೬, ೧೯೫೩ ರಂದು ವಿಧಿವಶರಾದರು. ಅವರ ನಿಧನ ಸಾಹಿತ್ಯಲೋಕಕ್ಕೆ ಆದ ಅಪಾರ ನಷ್ಟ ಎಂಬುದು ಅವರ ಕೃತಿಗಳನ್ನು ಅವಲೋಕಿಸಿದವರಿಗೆ ಗೊತ್ತಾಗುತ್ತದೆ. ವೀರಶೈವ ಹಾಗೂ ವಚನ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ ಅಜರಾಮರ.

ಎಂ.ಆರ್. ಶ್ರೀನಿವಾಸಮೂರ್ತಿಯವರು ಹೊಸಗನ್ನಡದ ಪುಣ್ಯಪುರುಷರಲ್ಲಿ ಒಬ್ಬರಾಗಿದ್ದು, ಸಾಹಿತಿಯಾದವನು ಜಾತ್ಯಾತೀತನಾಗಿರಬೇಕು ಎಂಬುದನ್ನು ಸಾಬೀತುಪಡಿಸಿದ, ಸಾಹಿತಿಯ ಬದುಕು-ಬರಹಗಳೆರಡೂ ಶುದ್ಧವಾಗಿರಬೇಕು, ಮುಂದಿನ ತಲೆಮಾರಿಗೆ ಬೆಳಕಾಗಿರಬೇಕು ಎಂಬುದಕ್ಕೆ ಒಬ್ಬ ನಿದರ್ಶನದ ವ್ಯಕ್ತಿಯಾಗಿದ್ದಾರೆ. ಇಂದಿಗೂ ಸ್ಫೂರ್ತಿಯ ಸೆಲೆಯಾಗಿದ್ದಾರೆ ಎಂಬ ವಿದ್ವಾಂಸರ ಮಾತುಗಳು ಅವರ ಘನ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ. ವಚನಸಾಹಿತ್ಯವಿರುವವರೆಗೂ ಅವರು ಜೀವಂತವಾಗಿರುತ್ತಾರೆ. □

ಆವ ಬೀಜವು ಬೀಳುವಲ್ಲಿ ಮೊಳೆ ಮುಖ ಹಿಂಚು ಮುಂಚುಂಟೆ?
ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ?
ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು.
ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ?
ಬೇರೊಂದಡಿಯಿಡದಿರು, ಮಾರಯ್ಯಪ್ರಿಯ
ಅಮಲೇಶ್ವರಲಿಂಗವನರಿಯಬಲ್ಲಡೆ.

– ಆಯ್ದಕ್ಕಿ ಲಕ್ಕಮ್ಮ





# ವಚನಗಳಲ್ಲಿ ಮಾಯಾದೇವಿ

## ಚಂದ್ರಶೇಖರ ಕಗ್ಗಲ್ಲುಗೌಡ್ರು

**ಮುಂ**ದೊಂದು ದಿನ ಭುವಿಯಲ್ಲಿರುವ ಚಿನ್ನದ ನಿಕ್ಷೇಪ ಮುಗಿಯಬಹುದು. ಆದರೆ ವಚನವೆಂಬ ಚಿನ್ನದ ಗಣಿ ಮುಗಿಯುವುದಿಲ್ಲ. ದಿನದಿಂದ ದಿನಕ್ಕೆ, ಯುಗದಿಂದ ಯುಗಕ್ಕೆ ಅಕ್ಷಯವಾಗುತ್ತಿದೆ. ಸಂಶೋಧನಾಸಕ್ತರಿಗೆ ವಚನ ಅಧ್ಯಯನ ಮೊಗೆದಷ್ಟು ಒರತೆಯ ನೀರಿನಂತೆ ಜಿನುಗುತ್ತಿದೆ. ಅಲ್ಲಮನ ಎರಡು ವಚನಗಳಲ್ಲಿ ಮಾಯಾದೇವಿ ಎಂಬ ಹೆಸರು ಉಲ್ಲೇಖವಾಗಿದ್ದು ಅನೇಕ ಪ್ರಶ್ನೆಗಳಿಗೆ ಅವಕಾಶ ಮಾಡಿಕೊಟ್ಟಿದೆ. ಆ ವಚನಗಳು ಕೆಳಗಿನಂತಿವೆ.

೧) ವಚನ ಸಂಖ್ಯೆ: ೧೪೦೫.
ಭಾವಗೆಟ್ಟು ಭವನಷ್ಟನು, ಒಡಹುಟ್ಟಿದ ಐವರ ಕೈಬಿಟ್ಟನು.
ಭಂಡನು ಲಜ್ಜೆಭಂಡನು, ಕಂಡಡೆ ನುಡಿಸದಿರಾ ಮಾಯಾದೇವಿ,
ಅರಿವನುಟ್ಟು ನೆರೆಮರುಳಾದನು,
ಹುಟ್ಟ ಮುರಿದನು ಮಡಕೆಯನೊಡೆದನು,
ಆದಿಪುರಾತನು ಅಚಲಲಿಂಗೈಕ್ಯನು.
ಗುಹೇಶ್ವರನಲ್ಲಯ್ಯಂಗೆ ಮೂಗಿಲ್ಲ ಮಗಳೆ. (೭೧೩)

೨) ವಚನ ಸಂಖ್ಯೆ: ೧೫೭೩.
ಸೆರಗ ಹಿಡಿದನು, ಸೀರೆಯ ಹರಿದನು.
ಹುಟ್ಟ ಮುರಿದನು, ಕಂದಲನೊಡೆದನು.
ಭಂಡನವ್ವಾ ಲಜ್ಜೆಭಂಡನವ್ವಾ ಕಂಡಡೆ ನುಡಿಸದಿರು ಎಲೆ ಮಾಯಾದೇವಿ.
ಆಯುಷ್ಯ ಹಿರಿದು ಭವಿಷ್ಯ ಕಿರಿದು,
ಭವಗೆಟ್ಟು ಹೋದ ಗುಹೇಶ್ವರ ಅಲ್ಲಯ್ಯಂಗೆ ಮೂಗಿಲ್ಲ ತಂಗಿ. (೮೮೦)

ಈ ವಚನಗಳಲ್ಲಿ ಉಲ್ಲೇಖವಾಗಿರುವ ಮಾಯಾದೇವಿ ಯಾರು? ೧೨ನೇ ಶತಮಾನದಲ್ಲಿ ಮೂರು ಜನ ಮಾಯಾದೇವಿಯರು ಕಂಡುಬರುತ್ತಾರೆ. ಒಬ್ಬರು ಅಲ್ಲಮನ ಜೀವನದಲ್ಲಿ, ಇನ್ನೊಬ್ಬರು ಬಸವಣ್ಣನವರ ಬದುಕಿನಲ್ಲಿ, ಮತ್ತೊಬ್ಬರು ಮರುಳಸಿದ್ಧರ ಜೀವನದಲ್ಲಿ. ಅಲ್ಲಮ ಉಲ್ಲೇಖಿಸಿದ ಮಾಯಾದೇವಿ ಯಾರು ಎಂಬುದರ ಬಗ್ಗೆ ಬೆಳಕು

ಪದವೀಧರ ಪ್ರಾಥಮಿಕ ಶಿಕ್ಷಕ, ಸಂಚಿಯ ಹೊನ್ನಮ್ಮ ಸ್ಮಾರಕ ಬಾಲಕಿಯರ ಸರ್ಕಾರಿ ಪ್ರೌಢಶಾಲೆ
ಕನಕ ಮಂಟಪ ಎದುರು, ಓಲ್ಡ್ ಟೌನ್ ಭದ್ರಾವತಿ ೫೭೭೩೦೧ ಮೊ: ೯೩೪೨೯ ೮೬೯೦೧

ಚೆಲ್ಲುವ ಕಿರುಪ್ರಯತ್ನವೇ ಈ ಲೇಖನ.

ಮಾಯಾದೇವಿ –೦೧.

ಹರಿಹರನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣನು "ಸತ್ಕುಲ ಸಾದೃಶ್ಯ ಸುಶೀಲೆಯರಪ್ಪ ಗಂಗಾದೇವಿ, ಮಾಯಿದೇವಿಯರೊಡನೆ ಮದುವೆಯಾದರೆಂದು" ಹರಿಹರ ಹೇಳಿದ್ದಾನೆ. ಇವರು ಯಾರ ಮಕ್ಕಳೆಂಬುದನ್ನು ತಿಳಿಸುವುದಿಲ್ಲ. ಪಾಲ್ಕುರಿಕೆ ಸೋಮನಾಥ, ಭೀಮಕವಿಗಳಿಬ್ಬರೂ ಈ ಎರಡೂ ಹೆಸರನ್ನು ಹೇಳುತ್ತಾರೆ. ಗಂಗಾಂಬಿಕೆ ಬಲದೇವ ದಂಡನಾಥನ ಮಗಳೆಂದು ತಿಳಿಸುತ್ತಾರೆ. ಆದರೆ ಮಾಯಿದೇವಿಯ ತಂದೆಯ ಹೆಸರನ್ನು ಸೂಚಿಸುವುದಿಲ್ಲ. ಷಡಾಕ್ಷರದೇವನೂ ಬಸವಣ್ಣನವರಿಗೆ ಗಂಗಾಂಬಿಕೆ, ಮಾಯಿದೇವಿ ಎಂಬ ಇಬ್ಬರು ಸತಿಯರಿದ್ದರು ಎಂದು ತಿಳಿಸುತ್ತಾನೆ.

ಲಕ್ಕಣ್ಣ ದಂಡೇಶ ಬಸವಣ್ಣನಿಗೆ ಗಂಗಾಂಬಿಕೆ, ನೀಲಾಂಬಿಕೆ ಎಂಬ ಇಬ್ಬರು ಪತ್ನಿಯರು ಎಂದು ಹೇಳಿದ್ದಾನೆ. ಚಾಮರಸ ಲಕ್ಕಣ್ಣ ದಂಡೇಶನಂತೆಯೇ ಬಿಜ್ಜಳ ಮಂತ್ರಿ ಪದವಿ ಕೊಟ್ಟ ನಂತರ ಬಸವಣ್ಣನವರಿಗೆ ಮದುವೆ ಮಾಡಿದ ಎಂದು ಹೇಳುತ್ತಾನೆ. ಆದರೆ ಯಾರೊಡನೆ ಎಂದು ಹೇಳುವುದಿಲ್ಲ. ಮುಂದೆ ಬಸವಣ್ಣನವರಿಗೆ ಬಾಲಸಂಗಯ್ಯ ಎಂಬ ಮಗ ಹುಟ್ಟಿದ ಎಂದು ಹೇಳುತ್ತಾನೆ. ಇದರಿಂದ ಇವನ ಪ್ರಕಾರ ಮದುವೆಯಾದವಳು ನೀಲಮ್ಮ ಎಂದು ಸ್ಪಷ್ಟವಾಗುತ್ತದೆ.

ವಿರೂಪಾಕ್ಷ ಪಂಡಿತ ಬಲದೇವನ ಮಗಳು ಗಂಗಾಂಬಿಕೆಯೊಬ್ಬಳೊಡನೆ ಬಸವಣ್ಣನವರ ಮದುವೆಯಾಯಿತು ಎಂದು ತಿಳಿಸುತ್ತಾನೆ. ಸಿಂಗಿರಾಜನೂ ಲಕ್ಕಣ್ಣ ದಂಡೇಶನಂತೆಯೇ ಗಂಗಾಂಬಿಕೆ, ನೀಲಾಂಬಿಕೆಯರ ಜೊತೆ ಬಸವಣ್ಣನ ಮದುವೆಯಾಯಿತು ಎಂದು ಹೇಳುತ್ತಾನೆ. ಗುಬ್ಬಿ ಮಲ್ಲಣಾರ್ಯನು ನೀಲಾಂಬಿಕೆ ಸಿದ್ಧರಸನ ಮಗಳು ಎನ್ನುತ್ತಾನೆ.

ಈ ಎಲ್ಲ ಹೇಳಿಕೆಯಿಂದ ತಿಳಿಯುವುದದೇನೆಂದರೆ ಬಸವಣ್ಣನವರಿಗೆ ಇಬ್ಬರು ಹೆಂಡತಿಯರಿದ್ದರು. ಅವರ ಹೆಸರು ಗಂಗಾದೇವಿ, ಮಾಯಿದೇವಿ. ಮಾಯಿದೇವಿಗೆ ನೀಲಲೊಚನೆ ಎಂಬುದು ಇನ್ನೊಂದು ಹೆಸರು. ಗಂಗಾದೇವಿ ಬಲದೇವನ ಮಗಳು, ನೀಲಾಂಬಿಕೆ ಸಿದ್ಧರಸನ ಮಗಳು, ಬಿಜ್ಜಳನ ಸಾಕು ತಂಗಿ.

ಮಾಯಾದೇವಿ –೦೨.

ಅಲ್ಲಮಪ್ರಭು ದೇವಸ್ಥಾನದಲ್ಲಿ ಮದ್ದಳೆ ಸೇವೆ ಸಲ್ಲಿಸುತ್ತಿದ್ದರು. ಅವರು ಪ್ರಾಯಕ್ಕೆ ಬಂದಾಗ ಮದ್ದಳೆ ನುಡಿಸುವ ಕಲೆಯಲ್ಲಿ ತುಂಬಾ ಪ್ರಾವೀಣ್ಯ ಪಡೆದುದನ್ನು ಹರಿಹರ ಮತ್ತು ಚಾಮರಸ ಸಂಪ್ರದಾಯಗಳು ಒಪ್ಪಿಕೊಳ್ಳುತ್ತವೆ. ಆ ಕಲಾಪ್ರದರ್ಶನದಿಂದಾಗಿಯೇ ಅವನ ಜೀವನದಲ್ಲಿ ಹೆಣ್ಣೊಂದರ ಪ್ರವೇಶವಾಗುತ್ತದೆ. ಹರಿಹರನ ಪ್ರಕಾರ ಆ ಹೆಣ್ಣು ಕಾಮಲತೆಯಾದರೆ, ಚಾಮರಸನ ಪ್ರಕಾರ ಅವಳು ಮಾಯಾದೇವಿ. ಅಲ್ಲಮನ ಸುಖಮಯ ದಾಂಪತ್ಯಜೀವನದಲ್ಲಿ ಕಾಮಲತೆಯ ಮರಣದಿಂದಾಗಿ ಒಂದು ಹೊಸ ತಿರುವು ಕಾಣಿಸಿಕೊಳ್ಳುತ್ತದೆಂದು ಹರಿಹರ ಹೇಳಿದರೆ, ತನ್ನನ್ನು ಕೂಡಿಕೊಳ್ಳಲು ಹಲವಂದದಿಂದ





ಪ್ರಯತ್ನಿಸುತ್ತಿದ್ದ ಮಾಯದೇವಿಯನ್ನು ತಿರಸ್ಕರಿಸಿ, ಅಲ್ಲಮನ ಜೀವನ ಹೊಸ ದಿಕ್ಕನ್ನು ಹಿಡಿಯಿತೆಂದು ಚಾಮರಸ ಪ್ರತಿಪಾದಿಸಿದ್ದಾನೆ.

ಮಾಯಾದೇವಿ –೦೩.

ವಿಶ್ವಬಂಧು ಮರುಳಸಿದ್ಧರು ಕೊಲ್ಲಾಪುರದ ಮಾಯಾದೇವಿಯ ಗರ್ವಭಂಗ ಮಾಡಿದ ಸಂಗತಿಯು ದೇವಕವಿಯ ಮರುಳಸಿದ್ಧ ಚರಿತೆಯಲ್ಲಿ ಉಲ್ಲೇಖವಾಗಿ ಮಾಯಾದೇವಿಯ ಹೆಸರಿನಲ್ಲಿ ೧೨ನೇ ಶತಮಾನದ ಶಾಸನವೊಂದಿದೆ.

ಶಿಲಾಹಾರ ಎರಡನೇ ಭೋಜನ ಕೊಲ್ಲಾಪುರದ ಶಾಸನ. ಸಂಖ್ಯೆ: ೨೯.

೦೧. ಸ್ವಸ್ತಿ ಶ್ರೀಮನ್ ಮಹಾಮಂಡಲೇಶ್ವರ ವೀರ ಭೋಜದೇವ ಪ್ರಣಾಲಕ ದುರ್ಗ ಶಿಬಿರೆ ಸುಖ ಸಂಕಥಾ ವಿನೋದೆ

೦೨. ನ ರಾಜ್ಯಂ ಕುರ್ವನಹಃ ಶಕನೃಪ ಕಾಲದ ಆರಭ್ಯ ವರ್ಷೇಷು ದ್ವಾದಶೋತ್ತರ ಶತಾಧಿಕ ಸಹಸ್ರೇಷು ನಿವೃತ್ತೇಷು ವರ್ತಮಾನ ಸಾ

೦೩. ಧಾರಣ ಸಂವತ್ಸರ ಅಂತರ್ಗತ ಪುಷ್ಯ ಬಹುಳ ದ್ವಾದಶಂ ಬಾಹುಮ ವರೆ ಭಾನೊತ್ತರಾಯಣ ಸಂಕ್ರಮಣ ಪರ್ವ್ವನಿ ನಿಜ ರಾಜ್ಯ ಅ

೦೪. ಭಿವೃದ್ಧಯೆ ಸಹವಾಸಿ ಲೋಕಣ ನಾಯಕೇನ ಕರಿತಸ್ಯ ಮಠಸ್ಯ ಅಮೃತೇಶ್ವರ ಮೂರ್ತಿ ಉಮಾಮಹೇಶ್ವರ ದೇವಸ್ಯ ಪಮೆಚೋಪಚ.

೦೫. ರ ಪೂಜಾರ್ಥಂ ಸಹವಾಸಿ ಬ್ರಾಹ್ಮಣ ಬೋಜನಾರ್ಥಂ ಶ್ರೀ ಮಹಾಲಕ್ಷ್ಮೀ ...... ತ್ರಿಕಾಲ ನೈವೇದ್ಯ ಪರಿಚಲಾರ್ಥಂ ತನ್ ಮಠ ಕಂಭ ಸ್ಫೂತಿ

೦೬. ತ ಜೀರ್ಣೋದ್ಧಾರತೇಂ ಇದೆನಾಡ ಅಂತರಘಟ ಕೊಪ್ಪರವಾಡ ಗ್ರಾಮ ಸಿಂಹಭ್ಯಂತರೆ ಪೂರ್ವ ದಿಗ್ಭಗೆ ತಿರವಾರಬಿದತ್ ಪ್ರಣಾಲೆ ದುರ್ಗ ಗಾಮಿ

೦೭. ನೋ ಮಾರ್ಘತ್ ಪೂರ್ವತಃ ಕರಾಡ ಕ್ಷೇ(ತ್ರಂ) ತಸ್ ಪೂರ್ವತಹಃ ಕ್ಷೇತ್ರಪಾಲದೇವೆನೋಪಾಲಾಕ್ಷಿತಯಃ ರಿಕ್ತ ತಟಾಕ ಪಾಲ್ಯಃ ಉತ್ತರಾಟಹ್

೦೮. (ಕರಂ)ಜಮಲತ ಪಶ್ಚಿಮತಃ ದೇಸಿಲೆಯ ಚೆಂಡಿಕೆಯ ವೃತ್ತಿ ಕ್ಷೆತ್ರ (ಕರಂ) ಜ ಕ್ಷೇತ್ರಯರ್ದಕ್ಷಿಣಾತಃ ಈವಂ ಚತುಃಸಿಂ ಅಭ್ಯಂತರೆ ಇ

೦೯. (ದೆ)ನಾಡ ದಂಡ ಮನೆನ ವಾಪ್ಯಕನಂ ಪಂಚಶದ ಅಧಿಕಂ ಪಂಚಶತಂ ಶಲಿಖಿಲ್ಲಕ್ಷೇತ್ರಂ ತತ್ ಪ್ರತಿಬದ್ಧಂ ತದ್ ಗ್ರಾಮ ಅಭ್ಯಂತರೆ ದ್ವಾದಶ

೧೦. ಸ್ತ ಪ್ರಮಾಣಂ ನಿವೇಶನಂ ತತ್ ಪ್ರತಿಬದ್ಧಂ ಖಿಡವಲಕಂ ಚ ಇತಾತ ಸರ್ವಂ ತನ್ ಮಠ ನಿವಿಷ್ಟ ಸಹವಾಸ್ಯೆ ಆದಿತ್ಯಭ

೧೧. ಟ್ಟ ಲಕ್ಷ್ಮೀಧರ ಭಟ್ಟ ಕರಹಾಟಕ ಪ್ರಭಾಕರ ಫೈಸಾಸ ವಾಸಿಯಣ ಫೈಸಾಸ ಇತಿ ಈವಂ ನಿವಿಷ್ಟ ಬ್ರಾಹ್ಮಣ ಚತುಷ್ಟಯ ಹಸ್ತೆ ಶಾ

೧೨. ಸನ ಸಹಿತಂ ಧಾರಾಪೂರ್ವಕಂ ಸರ್ವನಮಸ್ಯಂ ಸರ್ವ ಬಧಾ ಪರಿಹಾರಂ ಸರ್ವಾಯ ವಿಶುದ್ಧಂ ರಾಜಕೀಯನಂ ಅನಂಗುಲಿಪ್ರೇಕ್ಷಾನಿಯ

೧೩. ಮ ಅ ಚಂದ್ರಾರ್ಕಸ್ಥಿರಂ ದತ್ತವಾನ್ ಅನ್ಯಚ್ಚ ಶಕನೃಪ ಕಾಲದಾರಬ್ಧವರ್ಷೇಷು ಚತುರ್ದಶೋತ್ತರ ಶತಾಧಿಕ ಸಹಸ್ರೇಷು ನಿವೃತ್ತೇ

೧೪.ಷು ವರ್ತಮಾನಾ ಪರಿಧ್ವವಿ ಸಂವತ್ಸರಂತರ್ಗತ ಆಶ್ವಿಜ ಶುದ್ಧ ಪ್ರತಿಪದಿ ಶುಕ್ರವಾರೆ ತಸ್ಯ್ವವ ಸಹವಾಸಿ ಲೋಕಣ ನಾಯಕ

೧೫. ಕಸ್ಯ ಪುತ್ರಃ ಕಲಿಯಣ ನಾಯಕಃ (ಸ್ವ?) ............... (ಹ)........(ಕೌವ) .......... ಹ ಸ (ತ್ರೆ ಬ್ರಹ್ಮ) ಣ ಬೋಜನಾಥಂ ತಲುರಾಗೆಖೊಲ್ಲಂತರ್ಗತ ಅ

೧೬. ಗ್ರಹಾರ ಪೌಮಗ್ರಾಮಸಿಂ ಅಭ್ಯಂತರೆ ಪೂರ್ವ ದಿಗ್ಭಗೆ ತದ್ ಗ್ರಾಮ (ಮ) ಹಜನಾರ್ಧನ ಕ್ರಯೇನ ಗೃಹಿತ(ಮ್ ?) ಖಡ್ಡಿಯ(ಮ್?) ಲಕುಮಣಫೈ

೧೭. ಸಾಸಸ್ಯ ವೃತ್ತಿ ಮಧ್ಯೆ ಉತ್ತಮ ನಿವೃತ್ತ (ನಂ ಏಕಂ ಕನಿಷ್ಟನೀ) ವರ್ತನಾಮ್ ಏಕ( ಮೇವಂ ಅ) ರ್ಧಃ (ವೃ)ತ್ತಿಃ ತತ್ ಪ್ರತಿಬದ್ಧಂ ಉ(ತ್ತಮ) ಗೃಣಸ್ಯಾರ್ಧಂ ಮಧ್ಯಮಗ್ರಿ

೧೮. ಹಂ ಏಕಂ ತತ್ ಪ್ರತಿಬದ್ಧಂ ಖಡವಲಕಂ ಈ....................... ಜನ ಸ್ತ (ದಾ)ನ ಕ್ರಯೇನ ಗೃಹಿತ್ವ ಪೂ(ರ್ವೋ)ಕ್ತ ನಿವಿಷ್ಟ ಬ್ರಾಹ್ಮಣ ಚತು

೧೯. ಷ್ಟಯ ಹಾಸ್ತೆ ಧಾರಾ ಪೂರ್ವಕಂ ಸರ್ವಬಧಾ ಪ(ರಿಹಾರಂ ಸರ್ವಾಯವಿ) ಶುದ್ಧಂ (ಆಚಂ) ದ್ರರ್ಕಸ್ಥಿರಂ ದತ್ತವಾನ್ ಅನ್ಯಚ ಚ ಪ್ರಮಾದಿ ಸಂವತ್ಸರ

೨೦.ಅಂತರ್ಗತ ಫಾಲ್ಗುಣ ಶುದ್ಧ ಪಂಚಮಯಂ ಶುಕ್ರವಾರೆ .................. (ಗ್ರ)ಮ ಸಿಂ ಅಭ್ಯಂತರೆ ಪೂರ್ವ ದಿಗ್ಭಗೆ ಛಾಂದೋಗ ಸೋಮೇಶ್ವರಭಟ್ಟಸ್ಯ

೨೧. ದ(ಔ) ಹಿತ್ರ್ಯ ಮಾಯಿಂಕವ್ವೆಃ ವೃತ್ತೆ .......................... (ಸ ಏ)ವ ಕಲಿಯಣಃ ವೇದಾಧ್ಯಯನ (ಖೋ) ದಕ

೨೨. ಛ (ತ್) ತ್ರ ಬೋಜನಾರ್ಥಂ ತಸ್ಯಸ್ ಶಕ (ಸದ್ ದಾನ ಕ್ರಯೆನ) ಗೃಹಿತ್ವ ಪೂ(ರ್ವಕ್ತ ನಿ) ವಿಷ್ಟ ಬ್ರಾಹ್ಮಣಚತುಷ್ಟಯ ಹಸ್ತೆ ಧಾರಾ ಪೂರ್ವಕಂ ಸರ್ವ ಬ

೨೩. ಧ ಪರಿಹಾರಂ ಸರ್ವಾಯ ವಿಶುದ್ಧಂ ಅ ಚಂದ್ರಾರ್ಕಸ್ಥಿರಂ ದತ್ತವಾನ ಛ.

ದೇವಕವಿಯ ಮರುಳಸಿದ್ಧ ಚರಿತೆಯೂ ಸೇರಿದಂತೆ ಅನೇಕ ಕಾವ್ಯಗಳಲ್ಲಿ ಕೊಲ್ಲಾಪುರದ ಮಾಯೆಯನ್ನು ರಾಣಿ, ಯುವರಾಣಿ, ಮಹಾರಾಣಿಯಾಗಿ ವರ್ಣಿಸಲಾಗಿದೆ. ಇದು ಸತ್ಯವಲ್ಲ ಎಂಬುದು ನನ್ನ ನಿಲುವು. ಏಕೆಂದರೆ ಮಾಯೆ ರಾಣಿಯಾಗಿದ್ದಲ್ಲಿ ಶಾಸನಗಳಲ್ಲಿ ಎಲ್ಲಾದರೂ ಅದರ ಉಲ್ಲೇಖವಿರುತ್ತಿತ್ತು. ಹೊಯ್ಸಳರ ಶಾಂತಲೆ, ಚಾಲುಕ್ಯರ ಕೇತಲದೇವಿ, ಕಾಕತೀಯರ ರುದ್ರಾಂಬೆ ಹೀಗೆ ಅನೇಕ ರಾಣಿಯರ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ. ಆದರೆ ಮಾಯೆಯ ಹೆಸರು ರಾಣಿಯಾಗಿ ಎಲ್ಲೂ ಕಂಡುಬಂದಿಲ್ಲ.

ಶಕ ಸಂವತ್ಸರ ೧೧೧೨-೧೧೧೩ರ ಒಂದು ಶಾಸನದಲ್ಲಿ ಮಾಯಾದೇವಿಯ ಹೆಸರು ಉಲ್ಲೇಖಿತವಾಗಿದೆ. ರಾಣಿಯಾಗಿ ಅಲ್ಲ, ವೇದಪಾರಂಗತೆಯಾಗಿ ಶಾಸನದ ಪಠ್ಯದಲ್ಲಿ ಕಂಡುಬರುತ್ತಾಳೆ. ಅಂಬಾಬಾಯಿ ದೇವಸ್ಥಾನದ ಹತ್ತಿರವಿರುವ ಅಣ್ಣಾಚಾರ್ಯ ಪಂಡಿತನ





ಮನೆಯ ಗೋಡೆಯಲ್ಲಿ ಈ ಶಾಸನ ಸಿಕ್ಕಿದ್ದು ಇದನ್ನು ಕೊಲ್ಲಾಪುರದ ಟೌನ್ ಹಾಲ್‌ನಲ್ಲಿ ಇಡಲಾಗಿದೆ. ಈ ಶಾಸನ ಶಿಲಾಹಾರ ಎರಡನೇ ಭೋಜನ ಕಾಲದ್ದಾಗಿದೆ. ಶಾಸನ ೨೩ ಸಾಲುಗಳನ್ನು ಹೊಂದಿದೆ. ಸಂಸ್ಕೃತ ಭಾಷೆಯ ಶಾಸನವಾಗಿದ್ದು ನಾಗರಿ ಲಿಪಿಯಿಂದ ಕೂಡಿದೆ. ಶಾಸನದ ಪಠ್ಯ ಗದ್ಯರೂಪದಲ್ಲಿದೆ. ಶಾಸನದಲ್ಲಿ ಸಂಸ್ಕೃತ ಭಾಷೆಯ ಜೊತೆಗೆ ಬೇರೆ ಭಾಷೆಯ ಪದಗಳೂ ಕೂಡ ಸೇರಿಕೊಂಡಿವೆ. ನಾಲ್ಕು ಜನ ಬ್ರಾಹ್ಮಣರ ಹೆಸರು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆದಿತ್ಯಭಟ್ಟ, ಲಕ್ಷ್ಮೀಧರಭಟ್ಟ, ಕರಹಾಟದ ಪ್ರಭಾಕರ ಫೈಸಾಸ ಮತ್ತು ವಾಸಿಯಾಣ ಫೈಸಾಸ. ಈ ನಾಲ್ಕು ಜನರೂ ಲೋಕಣ ನಾಯಕ ಸ್ಥಾಪಿಸಿದ ಮಠದಲ್ಲಿ (ಅಥವಾ ಧಾರ್ಮಿಕ ಕೇಂದ್ರ ಅಥವಾ ದೇವಾಲಯ) ವಾಸವಾಗಿದ್ದರು. ಉಮಾಮಹೇಶ್ವರ ದೇವಸ್ಥಾನದ ಪೂಜೆಗೆ, ಮಹಾಲಕ್ಷ್ಮೀ ದೇವಸ್ಥಾನದ ಪೂಜೆಗೆ, ಬ್ರಾಹ್ಮಣರ ಅವಶ್ಯಕತೆಗಳಿಗೆ ಹಾಗೂ ಮಠದ ರಿಪೇರಿಗಾಗಿ ಇವರುಗಳಿಗೆ ಭೂಮಿಯನ್ನು ದಾನವಾಗಿ ಕೊಟ್ಟಿರುವುದನ್ನು ಶಾಸನ ಹೇಳುತ್ತದೆ. ಶಾಸನದ ಕಾಲ ಕ್ರಿ.ಶ.೧೧೯೦ ಕ್ಕೆ ಸರಿಹೊಂದುತ್ತದೆ. ವೀರ ಭೋಜ ಕೊಲ್ಲಾಪುರದಿಂದ ೧೧ ಮೈಲು ದೂರದಲ್ಲಿರುವ ಪನ್ನಾಳದುರ್ಗದಲ್ಲಿ ವಾಸವಾಗಿದ್ದನು.

ಶಾಸನದ ಎರಡನೇ ಭಾಗದಲ್ಲಿ ಆಶ್ವಿಜ, ಪರಿಧಾವಿ ಸಂವತ್ಸರ ಶಕ ವರುಷ ೧೧೧೪, ಕಲಿಯಣ ನಾಯಕನ ಹೆಸರು ಇದೆ. ಶಾಸನದ ಮೊದಲ ಭಾಗದಲ್ಲಿ ಕಂಡುಬಂದ ಲೋಕಣ ನಾಯಕನ ಮಗ ಕಲಿಯಣ. ಇವನೂ ಸಹ ಮೇಲೆ ಉಲ್ಲೇಖಿಸಲಾದ ನಾಲ್ಕು ಜನ ಬ್ರಾಹ್ಮಣರಿಗೆ ಭೂಮಿ ಹಾಗೂ ಮನೆಯನ್ನು ಕೊಟ್ಟಿದ್ದಾನೆ. ಈ ಆಸ್ತಿಯಲ್ಲ ಲಕುಮಣ ಫೈಸಾಸನಿಗೆ ಸೇರಿದ್ದು ಅವನು ಊರಿನ ವರ್ತಕರಿಗೆ ಮಾರಿದ್ದನ್ನು ಖರೀದಿಸಿ ಕಲಿಯಣ ಕೊಟ್ಟಿದ್ದಾನೆ.

ಅದೇ ದಿನ ಕಲಿಯಣ ನಾಯಕ ಸೋಮೇಶ್ವರಭಟ್ಟನ ಮಗಳ ಮಗಳಾದ ಮಾಯಿಂಕವ್ವಳನ್ನು ಖರೀದಿಸಿದ್ದಾನೆ. ಅವಳು ಸಾಮವೇದದ ವಿದ್ಯಾರ್ಥಿನಿಯಾಗಿದ್ದು ವೇದಗಳ ಪಾಠಶಾಲೆಯ ಮಕ್ಕಳ ಪೋಷಣೆಗಾಗಿ ಖರೀದಿಸಿದನು. ಇದಿಷ್ಟು ಶಾಸನದ ಪ್ರಮುಖಾಂಶ. ಮಾಯಿಂಕವ್ವ > ಮಾಯಂಕವ್ವ > ಮಾಯಕವ್ವ > ಮಾಯಕ್ಕ ಎಂದು ಕಾಲಾಂತರದಲ್ಲಿ ಬದಲಾವಣೆ ಆಗಿದೆ. ರಾಯಬಾಗ ತಾಲೂಕಿನ ಚಿಂಚಲಿ ಗ್ರಾಮದಲ್ಲಿ ಮಾಯಕ್ಕನ ದೇವಸ್ಥಾನವಿದೆ. ನಾನು ಅನೇಕ ಸಲ ನೋಡಿದ್ದೇನೆ. ಆ ಚಿಂಚಲಿಯ ಬಗ್ಗೆ ಮಹಾದೇವ ಬಣಕಾರರು ತಮ್ಮ ಮರುಳಸಿದ್ಧ ಕಾವ್ಯದಲ್ಲಿ ಉಲ್ಲೇಖಿಸಿದ್ದಾರೆ. ಗರ್ವಭಂಗದ ನಂತರದ ಕಳಾಹೀನ ಮಾಯೆಯ ಶಿಲ್ಪವೆಂದು ಇದನ್ನು ವಿದ್ವಾಂಸರು ಗುರುತಿಸಿದ್ದಾರೆ. ದೇವಸ್ಥಾನದ ಗರ್ಭಗುಡಿಯ ಬಾಗಿಲು ಉತ್ತರದಿಕ್ಕಿಗೆ ಇದೆ. ದೇವಸ್ಥಾನದ ಬಾಗಿಲಿನ ಎಡ ಮತ್ತು ಬಲ ಬದಿಯಲ್ಲಿರುವ ವಿಗ್ರಹಗಳ ಕೈಯಲ್ಲಿ ಲಿಂಗವಿದೆ. ಮಾಯಾದೇವಿಗೆ, ಮಾಯಕ್ಕ, ಮಹಾಕಾಳಿ, ಮಾಯಾ ಕರಹಾಟಿ, ಮಾಯವ್ವ ಎಂಬುದಾಗಿ ಸ್ಥಳೀಯರು ಕರೆಯುತ್ತಾರೆ.

ಈ ಮೇಲೆ ಉಲ್ಲೇಖಿಸಲ್ಪಟ್ಟ ಮಾಯಿಂಕವ್ವಳೇ ಮರುಳಸಿದ್ಧರಿಂದ ಗರ್ವಭಂಗಕ್ಕೆ

ಒಳಗಾದವಳು ಎಂಬುದು ನನ್ನ ತರ್ಕ. ಏಕೆಂದರೆ ಮಾಯಿಂಕವ್ವ ವೇದಪಾರಂಗತಳಾದ ಸ್ತ್ರೀ. ಆ ಕಾಲದಲ್ಲಿ ಒಬ್ಬ ಮಹಿಳೆ ವೇದಪಾರಂಗತಳಾಗಿರುವುದು ಅಸಾಮಾನ್ಯ ಸಾಧನೆ. ಅಲ್ಲದೆ ಆಕೆ ಮಾರಾಟವಾದ ಸ್ತ್ರೀ ಬೇರೆ. ಉಳಿದ ಮಹಿಳೆಯರಿಗಿಂತ ಈಕೆ ಭಿನ್ನವಾಗಿ ತೋರುತ್ತಾಳೆ. ಈ ಎಲ್ಲ ಕಾರಣಗಳಿಗಾಗಿ ಆಕೆಯಲ್ಲಿ ಗಂಡುಬೀರಿ ಸ್ವಭಾವ ಮೈಗೂಡಿತ್ತು ಎಂದು ತೋರುತ್ತದೆ. ಮಹಿಳೆಯರಿಗಷ್ಟೇ ಅಲ್ಲದೆ ಪುರುಷರಿಗೂ ಕೂಡ ಅವಳು ಸವಾಲಾಗಿರಬೇಕು. ಅನೇಕ ಸಿದ್ಧರನ್ನು ತನ್ನ ಕೈವಶ ಮಾಡಿಕೊಂಡಿರಬೇಕು. ಆ ಮಾಯೆಯ ಮದವನ್ನು ಅಡಗಿಸಲೆಂದು ಮರುಳಸಿದ್ಧ ಯಶಸ್ವಿಯಾಗಿದ್ದಾನೆ. ಬ್ರಾಹ್ಮಣರು, ಜೈನರು ಪ್ರಬಲರಾಗಿದ್ದಂತಹ ಊರುಗಳು ಮರುಳಸಿದ್ಧರ ಕಾರ್ಯಕ್ಷೇತ್ರಗಳಾಗಿದ್ದವು. ಇದಕ್ಕೆ ವಿದ್ಯಾ ಮತ್ತು ಧರ್ಮಕೇಂದ್ರಗಳಾಗಿದ್ದ ಬೇತೂರು, ಅಣಜಿ, ಬನ್ನಿಕೋಡು, ಅಸಗೋಡು ಮತ್ತು ಹಳೆಬೀಡುಗಳನ್ನು ಉದಾಹರಣೆಯಾಗಿ ನೋಡಬಹುದು.

ಬೇತೂರು ಅಗ್ರಹಾರದಲ್ಲಿ ಯಾಗ ಮಾಡುತ್ತಿದ್ದ ವಿದ್ವಾಂಸರಾದ ಬ್ರಾಹ್ಮಣರೊಡನೆ ಮತಧರ್ಮದ ವಿಷಯದಲ್ಲಿ ಸರಿ ಸಮಾನವಾಗಿ ನಿಂತು ಹೋರಾಡಿದ್ದನೆಂದರೆ ಅವನು ಘನ ಪಂಡಿತನಾಗಿದ್ದನೆಂದು ಹೇಳಲೇ ಬೇಕಾಗುತ್ತದೆ ಎಂದು ಸಂಶೋಧಕ ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಟ್ಟಿದ್ದಾರೆ. ಅಸಗೋಡು ಶೈವ ಕಾಳಾಮುಖ ಸ್ಥಾನವಾಗಿದ್ದರೆ, ಬನ್ನಿಕೋಡು ಗ್ರಾಮದಲ್ಲಿ ಜ್ಞಾನಶಕ್ತಿ ಪಂಡಿತರು ವಿಜಯದೇವ ಪಾಂಡ್ಯನ ಮಾತೆಯಾದ ಸೋವಳದೇವಿಯಿಂದ ಪೂಜಿತರಾಗಿದ್ದರು. ಕೊಲ್ಲಾಪುರ ಬ್ರಾಹ್ಮಣ ಹಾಗೂ ಜೈನರ ಪ್ರಾಬಲ್ಯದಿಂದ ಕೂಡಿದ್ದರಿಂದಾಗಿ ಮರುಳಸಿದ್ಧ ಮಾಯೆಯ ಗರ್ವಭಂಗ ಮಾಡಲು ಕೊಲ್ಲಾಪುರಕ್ಕೆ ಪ್ರಯಾಣ ಬೆಳೆಸಿದ್ದಾನೆ.

ಮರುಳಸಿದ್ಧನ ಕಾಲದಲ್ಲಿ ಕೊಲ್ಲಾಪುರದಲ್ಲಿ ಕರಹಾಟ ಅಥವಾ ಕರಹಾಡದ ಶಿಲಾಹಾರ ವಂಶದ ಅರಸರು ಆಳುತ್ತಿದ್ದ ಕಾರಣ, ಈ ಅರಸನನ್ನು ಕರಟ (ಕರಹಾಟ) ಎಂದಿರಬಹುದು. ಚಾಲುಕ್ಯ ತ್ರಿಭುವನಮಲ್ಲ ೬ ನೇ ವಿಕ್ರಮಾದಿತ್ಯನ (ಕ್ರಿ.ಶ. ೧೦೭೬-೧೧೨೬) ಪತ್ನಿಯರಲ್ಲಿ ಒಬ್ಬಳಾದ ಕೊಲ್ಲಾಪುರದ ಕರಹಾಟ (ಕರಹಾಡ) ಶಿಲಾಹಾರ ರಾಜಪುತ್ರಿಯನ್ನು ಬಿಲ್ಹಣನ 'ವಿಕ್ರಮಾಂಕದೇವ ಚರಿತ'ದಲ್ಲಿ "ಕರಹಾಟಪತೇಃ ಪುತ್ರೀ" ಎಂದಿರುವುದನ್ನು ಗಮನಿಸಬಹುದೆಂದು ಸಂಶೋಧಕ ಎಂ. ಗೋವಿಂದ ಪೈ ಯವರು ಅಭಿಪ್ರಾಯಪಟ್ಟಿದ್ದಾರೆ. ಮಾಯಾದೇವಿ ಯುವರಾಣಿ ಎಂದು, ಅವಳ ತಂದೆ ಕರಟ ರಾಜನೆಂದು ಇವರ ಅಭಿಪ್ರಾಯದಲ್ಲಿ ವ್ಯಕ್ತವಾಗಿದೆ. ಮಾಯಾದೇವಿಯ ಕಾಲವನ್ನು ಗೋವಿಂದ ಪೈ ಯವರು ಶಿಲಾಹಾರ ಸಾಮ್ರಾಜ್ಯದವರೆಗೆ ತೆಗೆದುಕೊಂಡು ಹೋಗಿರುವುದು ಸತ್ಯವಾದರೂ ಕೂಡ ಅವಳನ್ನು ಯುವರಾಣಿ ಎಂದು ಭಾವಿಸಿದ್ದು ಅವರಿಗೆ ಬಹುಶಃ ಶಿಲಾಶಾಸನದ ಮಾಹಿತಿಯ ಕೊರತೆ ಇತ್ತು ಎಂಬುದು ಗೊತ್ತಾಗುತ್ತದೆ.

ಕರಹಾಟದ ಪ್ರಭಾಕರ ಫೈಸಾಸನನ್ನೇ ಕಾವ್ಯದಲ್ಲಿ ಕರಟನೆಂದು ವರ್ಣಿಸಿರಬಹುದು. ಅವನು ಕೊಲ್ಲಾಪುರದಲ್ಲಿ ಪ್ರಧಾನ ಪಾತ್ರವನ್ನು ನಿರ್ವಹಿಸಿದಂತೆ ತೋರುತ್ತದೆ. ಆದ್ದರಿಂದ





ಅವನನ್ನು ಕರಟಾಸುರನೆಂದೇ ಸಾಹಿತ್ಯಕೃತಿಗಳು ವರ್ಣಿಸಿವೆ. ಆರಂಭದಲ್ಲಿ ಆ ನಾಲ್ಕು ಜನ ಬ್ರಾಹ್ಮಣ ಪಂಡಿತರು ಮರುಳಸಿದ್ಧರಲ್ಲಿ ವಾದಿಸಿ ಸೋತಿರಬೇಕು. ಆ ಅಪಮಾನದ ಸೇಡಿಗಾಗಿ ಮಾಯಾದೇವಿಯನ್ನು ಮುಂದೆ ಬಿಟ್ಟು ಗೆಲ್ಲಲು ಯತ್ನಿಸಿದ್ದಾರೆ. ವಾದದಲ್ಲಿ ಮಾಯಾದೇವಿ ಸೋತ ನಂತರ ಅವಳ ಮೂಲಕ ವಿಷಪ್ರಾಶನ ಮಾಡಿಸಿದ್ದಾರೆ. ಅದರಿಂದಲೂ ಮರುಳಸಿದ್ಧ ಬದುಕುಳಿದಾಗ ಮಾಯಾದೇವಿಯಿಂದ ವಿಷಯಾಸಕ್ತಿ ಕೆರಳಿಸುವಂತಹ ನೃತ್ಯ ಮಾಡಿಸಿದ್ದಾರೆ. ಇವೆಲ್ಲಕ್ಕೂ ವಿಚಲಿತನಾಗದೆ ಮರುಳಸಿದ್ಧ ಸ್ಥಿತಪ್ರಜ್ಞೆಯಿಂದ ನಿಂತು ಮಾಯಾದೇವಿಯನ್ನು ತಾಯಿಯಂತೆ, ಮಗಳಂತೆ ಕಂಡು ಮರುಗಿದ್ದಾನೆ. ಆಗ ಮಾಯಾದೇವಿ ಸಂಪೂರ್ಣ ಶರಣಾಗತಳಾಗಿ ಶರಣೆಯಾಗಿ ಅವನನ್ನು ಹಿಂಬಾಲಿಸಿದ್ದಾಳೆ.

ಶಿಲಾಹಾರ ಎರಡನೇ ಭೋಜನ ಇನ್ನೊಂದು ಶಾಸನ ಕೊಲ್ಲಾಪುರದಲ್ಲಿ ಲಭ್ಯವಿದೆ. ಶಾಸನದ ಸಂಖ್ಯೆ: ೨. ಶಾಸನದ ಕಾಲ ಶಕ ವರ್ಷ ೧೧೦೪. ಈ ಶಾಸನದಲ್ಲೂ ಕೂಡ ಲೋಕಣ ನಾಯಕನ ಹೆಸರು ಪ್ರಸ್ತಾಪವಾಗಿದೆ. ನಾಲ್ಕು ಜನ ಬ್ರಾಹ್ಮಣ ಪಂಡಿತರಿಗೆ ಮಠದ ಅಭಿವೃದ್ಧಿಗಾಗಿ ಹಾಗೂ ಲಕ್ಷ್ಮೀದೇವಿಯ ಪೂಜೆಗಾಗಿ ದಾನ ನೀಡಿದನ್ನು ಶಾಸನ ತಿಳಿಸುತ್ತದೆ. ಆ ಬ್ರಾಹ್ಮಣ ಪಂಡಿತರು ಯಾರೆಂದರೆ ಆದಿತ್ಯ ಭಟ್ಟ, ಜನಾರ್ಧನ ಭಟ್ಟ, ಕರಹಾಟಕ ಪ್ರಭಾಕರ ಭಟ್ಟ ಮತ್ತು ವಾಸಿಯಣ ಭಟ್ಟ. ಈ ನಾಲ್ಕು ಜನ ಬ್ರಾಹ್ಮಣ ಪಂಡಿತರಲ್ಲಿ ಜನಾರ್ದನ ಭಟ್ಟನನ್ನು ಹೊರತು ಪಡಿಸಿ ಉಳಿದ ಮೂವರು ಬ್ರಾಹ್ಮಣ ಪಂಡಿತರು ಶಿಲಾಹಾರ ಎರಡನೇ ಭೋಜನ ಶಕ ವರ್ಷ ೧೧೧೨-೧೧೧೫ ರ ಶಾಸನದಲ್ಲಿ ಕಂಡುಬರುತ್ತಾರೆ. ಜನಾರ್ದನ ಭಟ್ಟನ ಬದಲಾಗಿ ಲಕ್ಷ್ಮೀಧರ ಭಟ್ಟ ಅವಕಾಶವನ್ನು ಪಡೆದುಕೊಂಡಿದ್ದಾನೆ. ಈ ಎರಡು ಶಾಸನಗಳು ಸಂಸ್ಕೃತದಲ್ಲಿ ಇದ್ದು, ಕೊಲ್ಲಾಪುರದಲ್ಲಿ ಬ್ರಾಹ್ಮಣರ ಪ್ರಾಬಲ್ಯ ಇತ್ತು ಎಂಬುದನ್ನು ದೃಢಪಡಿಸುತ್ತದೆ. ಈ ಕಾರಣಕ್ಕಾಗಿಯೇ ಮರುಳಸಿದ್ಧರು ಕೊಲ್ಲಾಪುರವನ್ನು ಗುರಿಯಾಗಿಸಿಕೊಂಡು ಕಾರ್ಯ ಸಾಧಿಸಿದ್ದಾರೆ.

ಅಲ್ಲಮಪ್ರಭುವನ್ನು ಹೊರತುಪಡಿಸಿ ಬೇರೆ ಯಾರ ವಚನದಲ್ಲಿಯೂ ಕೂಡ ಮಾಯಾದೇವಿಯ ಪ್ರಸ್ತಾಪವಾಗಿಲ್ಲ. ಬಸವಣ್ಣನವರ ಪತ್ನಿ ನೀಲಾಂಬಿಕೆಯೇ ಮಾಯಾದೇವಿ ಎಂಬುದಕ್ಕೆ ಯಾವುದೇ ವಚನಗಳಲ್ಲಿ ಆಧಾರವಿಲ್ಲ. ಸ್ವತಃ ಬಸವಣ್ಣನವರು ತಮ್ಮ ಯಾವ ವಚನಗಳಲ್ಲಿಯೂ ಕೂಡ ಮಾಯಾದೇವಿಯ ಕುರಿತು ಏನನ್ನೂ ಹೇಳಿಲ್ಲ. ನಂತರದ ಕಾವ್ಯಗಳಲ್ಲಿ ಬಸವಣ್ಣನವರ ಪತ್ನಿ ಮಾಯಿದೇವಿ ಎಂಬ ಬಗ್ಗೆ ಕವಿಗಳು ಉಲ್ಲೇಖಿಸಿದ್ದಾರೆ. ಆದ್ದರಿಂದ ಅಲ್ಲಮ ಉಲ್ಲೇಖಿಸಿದ ಮಾಯಾದೇವಿ ಬಸವಣ್ಣನವರ ಪತ್ನಿ ಆಗಿರುವ ಸಾಧ್ಯತೆ ತೀರಾ ಕಡಿಮೆ.

ಚಾಮರಸ ಪ್ರತಿಪಾದಿಸಿರುವ ಮಾಯಾದೇವಿ ಅಲ್ಲಮನ ಬದುಕಿನಲ್ಲಿ ಪ್ರವೇಶ ಪಡೆಯಲೆತ್ನಿಸಿ ತಿರಸ್ಕಾರಕ್ಕೆ ಒಳಗಾದ ಇದಕ್ಕೆ ಚಾಮರಸನ ಪ್ರಭುಲಿಂಗಲೀಲೆಯನ್ನು ಹೊರತುಪಡಿಸಿದರೆ ಬೇರೆ ಸಾಹಿತ್ಯ ದಾಖಲೆಯಾಗಲಿ ಅಥವಾ ಶಾಸನದ ಬಲವಾಗಲಿ ಕಂಡುಬಂದಿಲ್ಲ. ಹರಿಹರ ಹೇಳಿದ ಚಾರುಲತೆ, ಚಾಮರಸ ಹೇಳಿದ ಮಾಯದೇವಿಯ

ನಡುವೆ ಹೆಸರಿನ ಸಾಮ್ಯತೆ ಕಂಡುಬರುತ್ತಿಲ್ಲ. ಆದ ಕಾರಣ ಅಲ್ಲಮ ಉಲ್ಲೇಖಿಸಿದ ಮಾಯಾದೇವಿ ಬೇರೊಬ್ಬಳೇ ಇರುವಂತೆ ತೋರುವುದು.

ವಿಶ್ವಬಂಧು ಮರುಳಸಿದ್ಧರಿಂದ ಗರ್ವಭಂಗಕ್ಕೊಳಗಾಗಿ ಶರಣೆಯಾದ ಕೊಲ್ಲಾಪುರದ ಮಾಯಾದೇವಿ ಅಲ್ಲಮನ ಸಂಪರ್ಕಕ್ಕೆ ಬಂದಿರುವ ಸಾಧ್ಯತೆ ಇದೆ. ಆಗ ಅಲ್ಲಮನಿಂದ ಆಕೆ ಉಪದೇಶ ಪಡೆದಿರಬಹುದು. ಅಲ್ಲಮ ನೆಲೆನಿಂತದ್ದಕ್ಕಿಂತ ತಿರುಗಾಡಿದ್ದೇ ಹೆಚ್ಚು. ಹೀಗೆ ತಿರುಗಾಡುತ್ತಿರುವಾಗಲೇ ಸಿದ್ಧರಾಮ ಅಲ್ಲಮನ ಸಂಪರ್ಕಕ್ಕೆ ಬಂದಿದ್ದು ಇತಿಹಾಸ. ಇಂತಹ ತಿರುಗಾಟದಲ್ಲಿ ಮಾಯಾದೇವಿಯ ಭೇಟಿಯಾಗಿರಬಹುದು. ಹಲವಾರು ವಿಚಾರಗಳು ವಿನಿಮಯವಾಗಿರಬೇಕು. ಆದ್ದರಿಂದಲೇ ಅಲ್ಲಮ ಅವಳ ಹೆಸರನ್ನು ಉಲ್ಲೇಖಿಸಿದ್ದಾನೆ ಎಂದು ಭಾವಿಸಬಹುದು. ಕೊಲ್ಲಾಪುರದ ಮಾಯಾದೇವಿಯ ಕುರಿತು ಶಾಸನ ದೊರಕಿರುವುದು ಅವಳ ಇತಿಹಾಸಕ್ಕೆ ಸಾಕ್ಷಿಯಾಗಿದೆ. ಅಲ್ಲಮ ಉಲ್ಲೇಖಿಸಿದ ಮಾಯಾದೇವಿ ಮರುಳಸಿದ್ಧರಿಂದ ಗರ್ವಭಂಗಕ್ಕೆ ಒಳಗಾದವಳು ಎಂದು ಸದ್ಯಕ್ಕೆ ತರ್ಕಿಸಬಹುದು. ಮರುಳಸಿದ್ಧನ ಸಮಾಜೋ ಧಾರ್ಮಿಕ ಕಾರ್ಯಗಳಿಂದಾಗಿ ಜನಮಾನಸದಲ್ಲಿ ಅವನು ದೇವರಾಗಿಬಿಟ್ಟದ್ದು ಅತಿಶಯೋಕ್ತಿ ಅಲ್ಲ. ರಾಜ್ಯದ ಅನೇಕ ಭಾಗಗಳಲ್ಲಿ ಮರುಳಸಿದ್ಧನ ದೇವಾಲಯಗಳು ಕಂಡು ಬರುತ್ತವೆ. ಅಂತಹ ದೇವಾಲಯ ಕಂಬಾಳದಲ್ಲಿದ್ದು ಅದರ ಕುರಿತಾದ ಶಾಸನ ಶಿವಗಂಗಾ ಬೆಟ್ಟದಲ್ಲಿದೆ.

ಶಿವಗಂಗಾ ಬೆಟ್ಟದಲ್ಲಿರುವ ಗಂಗಾಧರೇಶ್ವರ ದೇವಸ್ಥಾನ ಮಹಾದ್ವಾರದ ಪೂರ್ವಕ್ಕೆ ನೆಟ್ಟಿರುವ ಕಲ್ಲು. ಪ್ರಮಾಣ: ೪ ಅಡಿ ೬ ಇಂಚು ಎತ್ತರ, ೨ ಅಡಿ ಅಗಲ.

೧. ಶುಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರು
೨. ಷ ೧೪೬೬ ನೆಯ ಕ್ರೋಧಿಸಂವತ್ಸರದ ಮಾಘ ಬ ೧೪ ಆ ಋಖ ಶ್ರೀ ಮ
೩. ಹಾರಾಜಾಧಿರಾಜ ಪರೇಶ್ವರ ಶ್ರೀ ವೀರಪ್ರತಾಪ ಶ್ರೀ ವೀರ ಸದಾಸಿವದೇವ
೪. ಮಹಾರಾಯರು ಪ್ರುಥ್ವೀ ಸಾಂಬ್ರಾಜ್ಯಂಗೈಉತ್ತಿರಲು
೫. ಭಂಡಿಯ ಬಸವಣನಾಯಕರಸರ ಮಗ ಸದಾಶಿವ
೬.ದೇವಮಹಾರಾಯರು ಅಮರನಾಯಕತನಕೆ ಪಾಲಿಸಿದ ಮ
೭. ಲೆನಾಡ ಗೂಳೂರು ಮಂಣೆಯ ಸೀಮೆಯಲಿ ಶಿವಗಂಗೆಯ
೮. ಗಂಗಾಧರದೇವರಿಗೆ ಸಲುವ ಪುರಗಳು ಹೊಂನಂಮನಸಿ
೯. ಹ್ಯಾಸನ ಮಹತ್ತಿಗೆ ಸಲುವ ಪುರಗಳು ಮೇಲಣಗವಿಯ
೧೦. ಸಿಂಹ್ಯಾಸನಕೆ ಸಲುವ ಪುರಗಳು ಬೆಂನದ ಕಂಥೆಯ
೧೧. ಮಠಕೆ ಸಲುವ ಪುರಗಳು ಧರ್ಮದ ಗವಿಯ ಪುರ ಬಯ
೧೨. ಲ ಬಸವನ ಗವಿಯ ಪುರಕೆ ಕಂಬಾಳ ಮರುಳಸಿದ್ಧಯ ದೇವ
೧೩. ರ ಪುರ ಯಿವರೆಲ್ಲರಿಗೆ ಸಲುವ ಬೆಲುಪಾನ ಕೊಡಗಿಗಳು
೧೪. ಯಿಲ್ಲವೆಲ್ಲವಕೂ ಜೋಡಿ ಬೇಡಿಗೆಯೆಲ್ಲವನೂ ಸರ್ವ್ವಮಾ
೧೫. ಂನ್ಯವಾಗಿ ಬಿಟ್ಟು ಸದಾಶಿವರಾಯರಿಗೆ ಪುಣ್ಯವಾಗ





೧೬. (ವಾಗ) ಬೇಕೆಂದು ಸಿವರಾತ್ರಿ ಪುಣ್ಯಕಾಲದಲು ಕೊರ
೧೭. ಮರಮರುಗನಾಥಪ್ರತಿ .... ಸೆಟೆಯರು ರಾಮೆಯ
೧೮. ಗಉಡರು ಹಲಗಸೆಟಿಯರ ಅನುಮತದಿಂದ ಭಂಡಿಯ
೧೯. ಬಸವಂಣನಾಯ್ಕರು ಸಹಿರಣ್ಯೋದಕ ದಾನ ಧಾರಾಪೂ
೨೦. ರ್ವ್ವಕವಾಗಿ ಸಮರ್ಪಿಸ್ತ ಶಿಲಾಶಾಸನ ಇ ಧರ್ಮಕೆ ಅಳುಪಿದವರು
೨೧. ಗಂಗೆಯ ತೀರದಲಿ ಕವಿಲೆಯ ಕೊಂದ ಪಾತಕಕೆ ಹೋಹರು
೨೨. ವಾರಣಾಸಿಯಲಿ ಮಾತ್ರುಗ್ರಮನ ಮಾಡಿದ ಪಾಪಕೆ ಹೋ
೨೩. ಹರು ದಾನಪಾಲನಯೋರ್ಮಧ್ಯೆ ದಾನಾಶ್ರೇಯೋನುಪಾಲ
೨೪. ನಂದಾನಾಸ್ವರ್ಗಮವಾಪ್ನೋತಿಪಾಲನಾದಚ್ಯುತಂಪದಂ ಶ್ರೀ.

ಮೇಲಿನ ಶಾಸನದ ಕಾಲ ಶಾಲಿವಾಹನ ಶಕವರುಷ ೧೪೬೬ ಕ್ರೋಧಿ ಸಂವತ್ಸರ ಮಾಘ ಬಹುಳ ೧೪. ಇದು ಕ್ರಿ.ಶ. ೧೫೪೪ ಕ್ಕೆ ಸರಿಹೊಂದುತ್ತದೆ. ಇದು ಸದಾಸಿವದೇವರಾಯರ ಕಾಲದ ಶಾಸನವಾಗಿದೆ. ಕಂಬಾಳದಲ್ಲಿ ಮರುಳಸಿದ್ಧ ಹಾಗೂ ಜಟ್ಟಿಗನ ದೇವಾಲಯವಿದೆ ಎಂದು ಮಹಾದೇವ ಬಣಕಾರರು ತಮ್ಮ ಮರುಳಸಿದ್ಧ ಕಾವ್ಯದಲ್ಲಿ ಉಲ್ಲೇಖಿಸಿದ್ದಾರೆ. ಅಲ್ಲಿ ದೇವಸ್ಥಾನ ನಿರ್ಮಾಣವಾಗಿದೆ. ೧೬ ನೇ ಶತಮಾನಕ್ಕಾಗಲೇ ಮರುಳಸಿದ್ಧ ದೇವರಾಗಿದ್ದರೆಂದು ಭಾವಿಸಬಹುದು. ಶಿವಗಂಗೆಯ ಗಂಗಾಧರ ದೇವಾಲಯಕ್ಕೆ ಸಲ್ಲುವ ಪುರಗಳಲ್ಲಿ ಕಂಬಾಳವು ಕೂಡ ಒಂದಾಗಿದೆ. ಸದಾಶಿವರಾಯರಿಗೆ ಪುಣ್ಯವಾಗಲೆಂದು ಶಿವರಾತ್ರಿಯ ಪುಣ್ಯಕಾಲದಲ್ಲಿ ದಾನಕೊಟ್ಟ ಶಾಸನವಾಗಿದೆ.

ಆಕರ ಗ್ರಂಥಗಳು.

೦೧. ವಚನ ಮಹಾಸಂಪುಟ –೧ ಪ್ರಧಾನ ಸಂಪಾದಕರು.ಡಾ. ಎಂ.ಎಂ. ಕಲಬುರ್ಗಿ.

೦೨. ಎಪಿಗ್ರಾಫಿಯಾ ಇಂಡಿಕಾ: ಕೊಲ್ಲಾಪುರ ಶಿಲಾಹಾರ ಎರಡನೇ ಭೋಜನ ಶಾಸನಗಳು.

೦೩. ಎಂ. ಗೋವಿಂದ ಪೈ ಹಾಗೂ ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು.

೦೪. ಬಸವಣ್ಣನವರ ಜೀವನವೃತ್ತಾಂತ : ಡಾ. ವೀರಣ್ಣ ರಾಜೂರ, ಮಹಾಮನೆ ಜೂನ್ ಸಂಚಿಕೆ.

□

ಮುಂದು ಜಾವದಲೆದ್ದು, ಲಿಂಗದಂಘ್ರಿಯ ಮುಟ್ಟಿ,
ಸುಪ್ರಭಾತ ಸಮಯದಲ್ಲಿ ಶಿವಭಕ್ತರ ಮುಖವ ನೋಡುವುದು.
ಹುಟ್ಟಿದುದಕ್ಕೆ ಇದೇ ಸಫಲ ನೋಡಾ,
ಸತ್ಯವಚನವಿಂತೆಂದುದು_ಇವಿಲ್ಲದವರ ನಾನೊಲ್ಲೆ ಕಾಣಾ ಗುಹೇಶ್ವರಾ.
– ಅಲ್ಲಮಪ್ರಭುದೇವ

# ಉಸಿರು ಚೆಲ್ಲಿದ ನರನೊಂದಿಗೆ ಹಸಿರೇಕೆ ಚಿತೆಗೇರಬೇಕು?

ಈರಪ್ಪ ಜಾಲಿಕಟ್ಟಿ

**ಮ**ನುಷ್ಯ ಮಂಗನಿಂದ ಮಾನವನೇನೋ ಆದ. ಆದರೆ, ಪ್ರಸ್ತುತ ಅತೀ ಲಾಭದ ನಶೆಯಲ್ಲಿ ಮಾನವ ಮತ್ತೆ ಮಂಗನಂತಾಡುತ್ತಿದ್ದಾನೆ. ಭೂಮಂಡಲದಲ್ಲಿ ಮಾನವ ಹುಟ್ಟಿದಾಗಿನಿಂದಲೂ ನಿರಂತರ ಪ್ರಕೃತಿಯ ಮೇಲೆ ಅಟ್ಟಹಾಸಗೈಯುತ್ತಲೇ ಜೀವಿಸುತ್ತಿದ್ದಾನೆ. ಅತ್ತ ನಭೋಮಂಡಲಕ್ಕೆ ಕಡುಕಾರ್ಬನ್ ಉಗುಳುವ ಯಂತ್ರಗಳನ್ನು ಹಾರಿಸಿ ವಾಯುಮಂಡಲವನ್ನು ಕಲುಷಿತಗೊಳಿಸುತ್ತಿದ್ದಾನೆ. ಇತ್ತ ಭೂಗರ್ಭಕ್ಕೆ ಬೃಹತ್ ಗಾತ್ರದ ಮಶಿನ್‌ಗಳನ್ನು ತೂರಿಸಿ ಅಲ್ಲಿಯೂ ಕಲಕುತ್ತಿದ್ದಾನೆ. ಪರಿಣಾಮ ಕಲುಷಿತ ಗಾಳಿ, ನೀರು. ಅಲ್ಲದೆ ಭೀಕರ ತಾಪದಿಂದ ಭೂಮಿಯ ಮೇಲೆ ಮಾನವ ಮಾತ್ರವಲ್ಲದೇ ಪ್ರಾಣಿ-ಪಕ್ಷಿ-ಸಸ್ಯ ಸಂಕುಲವೂ ಬೆಂದು ಹೋಗುತ್ತಿದೆ. ಇದಕ್ಕೆಲ್ಲ ಮುಖ್ಯ ಕಾರಣ ಮಾನವನ ಅತಿಯಾದ ದುರಾಸೆ. ಮನುಷ್ಯನ ದುರಾಸೆಗಳಿಗೆ ಬಲಿಯಾದ ನಿಸರ್ಗವಿಂದು ನಲುಗಿ ಹೋಗಿದೆ. ಜೀವರಾಶಿಯೋ ತತ್ತರಿಸಿ ಹೋಗುತ್ತಿದೆ. ಸ್ವಚ್ಛಂದ ಬಿಸಿಲು, ಮಳೆ, ಗಾಳಿ, ಹಸಿರು ಹೀಗೆ ಎಲ್ಲ ರೀತಿಯ ಅಗತ್ಯತೆ ಮಾನವನಿಗೆ ಇದೆ. ಆದರೆ, ಮನುಷ್ಯನ ಅಗತ್ಯತೆಯಾಗಲಿ, ಅವಶ್ಯಕತೆಯಾಗಲಿ ಪ್ರಕೃತಿಗೆ ಎಳ್ಳಷ್ಟೂ ಬೇಕಾಗಿಲ್ಲ ಎಂಬ ಸತ್ಯ ಮನುಷ್ಯನಿಗೆ ಗೋಚರವಾಗಬೇಕಾಗಿದೆ.

ಸಸಿಯೊಂದು ಬೆಳೆದು ಗಿಡವಾಗಿ ಹೆಮ್ಮರವಾಗಬೇಕೆಂದರೆ ಅನೇಕ ವರ್ಷಗಳೇ ಬೇಕಾಗುತ್ತವೆ. ಆದರೆ ಮಾನವ ಬೃಹತ್ ಯಂತ್ರಗಳ ಮೂಲಕ ಆ ಮರವನ್ನು ಕ್ಷಣಾರ್ಧದಲ್ಲಿ ಧರೆಗುರುಳಿಸಿ ಬೂದಿ ಮಾಡುತ್ತಿದ್ದಾನೆ. ಅಷ್ಟೇ ಅಲ್ಲದೆ, ಆ ಮರದ ಆಸರೆಯಲ್ಲಿದ್ದ ಅನೇಕ ಜೀವಿಗಳು ಹೇಳ ಹೆಸರಿಲ್ಲದಂತೆ ಅವಸಾನ ಕಾಣುತ್ತಿವೆ. ಇತ್ತ ಪ್ರಾಣವಾಯುವೂ ಕಡಿಮೆಯಾಗುತ್ತಿದೆ. ಅಂದಾಜಿಗೆ ಭಾರತದ ರಾಜ್ಯವೊಂದರಲ್ಲಿಯೇ ದಿನವೊಂದಕ್ಕೆ ಸಾವಿರ ಜನ ಸತ್ತರೆ ಅವರ ಮೃತದೇಹಗಳನ್ನು ದಹನ ಮಾಡಲು ಮೃತ ದೇಹಗಳಷ್ಟೇ ಸಂಖ್ಯೆಯಲ್ಲಿ ಮರಗಳನ್ನು ಕಡಿದು ದಹಿಸಲಾಗುತ್ತದೆ. ಹೀಗೆ ರಾಜ್ಯವೊಂದರಲ್ಲೇ ದಿನವೊಂದಕ್ಕೆ ಸಾವಿರ ಮರಗಳು ಸುಟ್ಟು ಬೂದಿಯಾದರೆ ನಿಸರ್ಗದ ಗತಿಯೇನು? ಜೀವ ಸಂಕುಲಕ್ಕಾಗುವ ಒಳಿತೇನು? ಆ ಸಾವಿರ ಮರಗಳ ಗುಂಪು ಒಂದು ಸಮುದಾಯ ಅರಣ್ಯಕ್ಕೆ ಸಮನಾಗಿತ್ತು. ಮರಗಳಿಂದ ಆಗುತ್ತಿದ್ದ ಉಪಯೋಗ ಎಷ್ಟು ಎಂಬುದನ್ನು ಮಾನವನು ಅರಿತು ಜವಾಬ್ದಾರಿಯುತವಾಗಿ ವರ್ತಿಸಬೇಕು. ಸಹಸ್ರಾರು ಮರಗಳು ದಿನವೊಂದಕ್ಕೇ ದಹನಕ್ಕಾಗಿ

ಗುಂಡ್ಲೂರ್ ಚಾಳ, ೨ನೇ ಅಡ್ಡರಸ್ತೆ, ಬೈಲಹೊಂಗಲ-೫೯೧೧೦೨ ಬೆಳಗಾವಿ ಮೊ: ೯೦೩೫೬೭೨೭೮೦೮



ಧರೆಗುರುಳಿದರೆ ಹಸಿರು, ಉಸಿರು ಉಳಿದೀತೆ? ಸ್ಮಶಾನಗಳಲ್ಲಿ ದಿನಪೂರ್ತಿ ಟನ್‌ಗಟ್ಟಲೆ ಕಟ್ಟಿಗೆ ಉರಿಸಲಾಗುತ್ತಿದೆ. ಭಾರತವನ್ನು ಹೊರತುಪಡಿಸಿ ಇತರ ದೇಶಗಳಲ್ಲಿ ಮೃತದೇಹಗಳನ್ನು ದಹನಮಾಡುವ ಉದಾಹರಣೆಗಳು ತೀರಾ ಕಡಿಮೆ. ಅಲ್ಲಿ ದಹನದ ಬದಲಾಗಿ ಧಫನ್ ಅಂದರೆ, ಮಣ್ಣಿನಲ್ಲಿ ಹೂಳುವ ಪದ್ಧತಿ ರೂಢಿಯಲ್ಲಿದೆ. ಈ ಪದ್ಧತಿಯನ್ನು ಪೂರ್ಣ ಪ್ರಮಾಣದಲ್ಲಿ ಭಾರತದಲ್ಲಿಯೂ ಅನುಸರಿಸಿದರೆ, ಪ್ರತಿನಿತ್ಯ ಸಾವಿರಾರು ಮರಗಳ ಮಾರಣ ಹೋಮವನ್ನು ತಪ್ಪಿಸಬಹುದು. ಜೀವಸಂಕುಲ ಉಳಿಸಬಹುದು.

ದಹನದ ಕ್ರಿಯೆಯಿಂದ ವಾತಾವರಣದಲ್ಲಿ ಇಂಗಾಲದ ಪ್ರಮಾಣ ಹೆಚ್ಚಾಗುತ್ತಲೇ ಹೋಗುತ್ತದೆ. ಇದರಿಂದ ಜಾಗತಿಕ ತಾಪಮಾನ ಅಧಿಕ ಮಟ್ಟದಲ್ಲಿ ಏರುತ್ತದೆ. ಜಲರಾಶಿ ಬತ್ತಿಹೋಗಿ ಜಲಚರಗಳು ಅಸು ನೀಗುತ್ತವೆ. ಶುದ್ಧ ಗಾಳಿ, ಬಿಸಿಗಾಳಿಯಾಗಿ ವಿಷ ಗಾಳಿಯಾಗುತ್ತದೆ. ಗಾಳಿಯಲ್ಲಿ ಹೆಚ್ಚಾದ ಕಾರ್ಬನ್ ಪ್ರಮಾಣವನ್ನು ಹೀರಿಕೊಳ್ಳಲು ಮರಗಳೇ ಇಲ್ಲವೆಂದಾದರೆ ವಾತಾವರಣದಲ್ಲಿ ಶುದ್ಧ ಗಾಳಿಯ ಪ್ರಮಾಣ ಕಡಿಮೆಯಾಗುತ್ತದೆ. ಪರಿಣಾಮ ಮತ್ತಷ್ಟು ವಿಕೋಪಗಳಿಗೆ ಮಾನವನೇ ನಾಂದಿ ಹಾಡಿದಂತಾಗುತ್ತದೆ. ಸತ್ತ ಮನುಷ್ಯನ ಜತೆಗೆ ಒಂದು ಮರವನ್ನೂ ಸಾವಿಗೆ ದೂಡುವುದರಿಂದ ನಿಮಿಷದಿಂದ ನಿಮಿಷಕ್ಕೆ ಹಸುರಿನ ಪ್ರಮಾಣ, ವಿಸ್ತಾರ ಕಡಿಮೆಯಾಗುತ್ತದೆ. ಈ ಬುದ್ಧಿಹೀನ ಕೃತ್ಯ ಹೀಗೆಯೇ ಮುಂದುವರೆದರೆ ಭವಿಷ್ಯದಲ್ಲಿ ಪ್ರತಿಯೊಬ್ಬರು ಬೆನ್ನಿಗೆ ಶುದ್ಧಗಾಳಿಯ ಯಂತ್ರ ಕಟ್ಟಿಕೊಂಡು ಜೀವನ ನಡೆಸುವ ದುಸ್ಥಿತಿ ದೂರವಿಲ್ಲ ಎನಿಸುತ್ತದೆ.

ಇದರೊಂದಿಗೆ ಪ್ರಸ್ತುತ ದಿನಗಳಲ್ಲಿ ಮಾನವನಿಗೆ ಕೈಗಾರಿಕಾ ಚಟುವಟಿಕೆಗಳಲ್ಲಿ ಉಪಯುಕ್ತವಾದ ಸಾಮಗ್ರಿಗಳು ಅಪಾರ ಸಂಖ್ಯೆಯಲ್ಲಿ ಉತ್ಪನ್ನಗೊಳ್ಳುತ್ತಿವೆ. ಇದು ಮೇಲ್ನೋಟಕ್ಕೆ ಅಭಿವೃದ್ಧಿಯ ಸಂಕೇತವಾಗಿ ಕಂಡರೂ, ಈ ಚಟುವಟಿಕೆಗಳು ನಮಗೂ, ಪರಿಸರಕ್ಕೂ ಹಾನಿಕಾರಕವಾಗಿ ಪರಿಣಮಿಸಿ ನಿತ್ಯ ಅಪಾಯದ ಗಂಟೆ ಅನುರುಣಿಸುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಪ್ರತಿ ನಿಮಿಷಕ್ಕೊಂದು ಹೊಸ ಆವಿಷ್ಕಾರವಾಗುತ್ತಿದೆ. ಆದರೆ, ಅಂಥ ಆವಿಷ್ಕಾರಗಳಿಂದ ಪರಿಸರಕ್ಕೆ ಆಗುವ ಒಳಿತು-ಕೆಡುಕುಗಳನ್ನು ಗಣನೆಗೆ ತೆಗೆದುಕೊಳ್ಳದೆ ಮಾನವ ತೀವ್ರಗತಿಯಲ್ಲಿ ತಂತ್ರಜ್ಞಾನದ ಬಳಕೆಗೆ ಮುಂದಾಗುತ್ತಿದ್ದಾನೆ. ಬದುಕಿಗೆ ವಿಜ್ಞಾನ, ತಂತ್ರಜ್ಞಾನ ಅಗತ್ಯವೆಂಬುದು ಭಾಗಶಃ ಸರಿ; ಅತಿಯಾದರೆ ಅಪಾಯಕಾರಿ ಎಂಬುದೂ ಮನವರಿಕೆಯಾಗಬೇಕು. ಪ್ರಾಕೃತಿಕ ವಿಕೋಪ, ಪರಿಸರದಲ್ಲಿನ ಏರುಪೇರುಗಳು ಸಂಭವಿಸಬಾರದೆಂದರೆ, ಪ್ರತಿಯೊಬ್ಬರೂ ಜವಾಬ್ದಾರಿ ಅರಿತು ಪರಿಸರದ ಬಗ್ಗೆ ಕಾಳಜಿವಹಿಸುವುದು ಅತೀ ಮುಖ್ಯವಾಗಿದೆ. ಮಾನವನ ನಿಸರ್ಗದ ಮೇಲಿನ ಉದಾಸೀನತೆ, ತಿಳಿಗೇಡಿತನದಿಂದ ನಿಸರ್ಗ ಬಸವಳಿಯುತ್ತಾ ಸಾಗಿ ಭವಿಷ್ಯದಲ್ಲಿ ನಮ್ಮ ಮಕ್ಕಳಿಗೆ ಪರಿಸರ ಎಂದರೆ ಹೀಗಿತ್ತು ಎಂದು ಚೌಕಟ್ಟಿನೊಳಗೆ ಬಣ್ಣ ಬಳಿದು ತೋರಿಸಬೇಕಾಗುತ್ತದೆ. ಪರಿಸರವನ್ನು ದುಸ್ಥಿತಿಗೆ ತಳ್ಳಿದರೆ ಮಾನವ ಸುಸ್ಥಿತಿಯಿಂದ ಬದುಕಲು ಸಾಧ್ಯವಿಲ್ಲ. ದುಸ್ಥಿತಿಗೆ ಈಡಾಗುವ ಮುನ್ನವೇ ಎಲ್ಲರಲ್ಲಿಯೂ ಸದ್ಬುದ್ಧಿ ಬೆಳೆಯುವಂತಾಗಬೇಕು. □

ನಿರ್ವಚನ ೩೯

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

**ಬ**ಸವನ ಭಕ್ತಿ ಕೊಟ್ಟಣದ ಮನೆ.\ ಸಿರಿಯಾಳನ ಭಕ್ತಿ ಕಸಬುಗೇರಿ.
ಸಿಂಧುಬಲ್ಲಾಳನ ಭಕ್ತಿ ಪರದಾರದ್ರೋಹ.
ಉಳಿದಾದ ಅಟಮಟ ಉದಾಸೀನ ದಾಸೋಹವ ಮಾಡುವವರ
ದೈನ್ಯವೆಂಬ ಭೂತ ಸೋಂಕಿತು.\
ಮಣ್ಣಿನ ಮನೆಯ ಕಟ್ಟಿ ಮಾಯಾ ಮೋಹಿನಿಯೆಂಬ
ಮಹೇಂದ್ರ ಜಾಲದೊಳಗಾಗಿ\ ಮಾಡುವ ಮಾಟ.
ಭಕ್ತನಲ್ಲಿ ಉಂಡು ಉದ್ದಂಡ ವೃತ್ತಿಯಲ್ಲಿ ನಡೆವವರು ಶಿವನಲ್ಲ.
ಇವರು ದೇವಲೋಕ ಮರ್ತ್ಯಲೋಕಕ್ಕೆ ಹೊರಗು.
ಶ್ರೀಗಿರಿ ಚೆನ್ನಮಲ್ಲಿಕಾರ್ಜುನಾ
ನನ್ನ ಭಕ್ತಿ ನಿನ್ನೊಳಗೈಕ್ಯವಾಯಿತ್ತಾಗಿ ನಿರ್ವಯಲಾದೆ ಕಾಣಾ

(ಶಿವಶರಣೆಯರ ವಚನಸಂಪುಟ, ಸ.ವ.ಸಂ.೫, ೧೯೯೩, ವ.೨೪೪, ಪು.೭೭)

ನಿಸರ್ಗವನ್ನೆ ಅನಾಮತ್ತಾಗಿ ಆಲಿಂಗಿಸುವ ಸುಕೋಮಲ ಶಕುಂತಲೆಯಂತೆ ಭಾಸವಾಗುವ ಅಕ್ಕ ಪ್ರಕೃತಿ ಪ್ರೇಮಿ ಭಾವಗೀತಕಾರ್ತಿ ಅಷ್ಟೆ ಅಲ್ಲ, ಅಗತ್ಯಬಿದ್ದರೆ ಅಲ್ಲಮನಂತೆಯೆ ನಿಡುನಿಷ್ಠುರಿ ಟೀಕಾಕಾರ್ತಿಯೂ ಆಗಿಬಿಡಬಲ್ಲಳು. ಹೂವಷ್ಟೆ ಮೃದುಭಾವಜೀವಿ ಅಕ್ಕ ವಜ್ರಕ್ಕಿಂತ ಕಾಠಿಣ್ಯವುಳ್ಳ ವ್ಯಕ್ತಿತ್ವದವಳು ಕೂಡ! 'ವೇದ ಶಾಸ್ತ್ರ ಆಗಮ ಪುರಾಣಗಳೆಲ್ಲವು\ ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿ ಭೋ' ಎಂದು ಹುಸಿ ವೈದಿಕರ ವಿರುದ್ಧ ಗುಡುಗಿದ ಅಕ್ಕ ಮಹಾಮನೆಯ ಹಲಕೆಲ ಹುಸಿಶರಣರ ನಕಲಿ ಜಂಗಮರ ತೋರಿಕೆಯ ಲಿಂಗವಂತಿಕೆ ಶುಷ್ಕಾಚರಣೆ ಚರ್ವಿತ ಚರ್ವಣ ಚರ್ಚೆ ವಿರುದ್ಧವೂ ಅದೇ ರೀತಿ ಕೂಗು ಹಾಕಿರುವಳೆ?

ಚೆನ್ನಬಸವಣ್ಣ ಹೇಳುವಂತೆ 'ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ' (ಚೆನ್ನಬಸವಣ್ಣನವರ ವಚನಸಂಪುಟ, ಸಂ: ಬಿ.ವಿ.ಮಲ್ಲಾಪುರ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೧, ಸಮಗ್ರ ವಚನ ಸಂಪುಟ ೩, ವ.೯೦೦, ಪು.೨೭೭) ಹದಿಹರೆಯದಲ್ಲೆ ಉಡುತಡಿ ಊರು ಬಿಟ್ಟು ಕಲ್ಯಾಣ ತಲುಪಿ ಅನುಭಾವಮಂಟಪದ ಗೋಷ್ಠಿಗಳಲ್ಲಿ ಭಾಗವಹಿಸಿ ಗೆದ್ದಳು. ಅನತಿ ಕಾಲದಲ್ಲೆ ಅಲ್ಲಿಂದ ಶ್ರೀಶೈಲಕ್ಕೆ ಹೊರಟಳು, ನಿಜ. ಆದರೆ ಅಲ್ಲಿಗೆ ತಲುಪುತ್ತಿದ್ದಂತೆ

'ಅನಿಮಿಷ', ಕ್ರಾಸ್-7, ದುರ್ಗಿಗುಡಿ ಹಂತ 1, ಹೊನ್ನಾಳಿ - 577 217, ದಾವಣಗೆರೆ ಜಿಲ್ಲೆ
ಮೊ.ನಂ. 98801 30203



ಕದಳಿವನದಲ್ಲಿ ಐಕ್ಯಳಾದಂತೆ ಕಾಣುವುದಿಲ್ಲ. ಶ್ರೀಶೈಲಾರಣ್ಯದೊಡಲಲ್ಲಿ ಇಂದಿಗೂ ಜತನವಾಗಿರುವ ಅಕ್ಕಮಹಾದೇವಿ ಅನುಭಾವಗೈದ ತಂಪು ಗುಹೆ ಹೊಕ್ಕರೆ, ಬಹುಶಃ ಅಲ್ಲೆ ಅವಳು ಸುದೀರ್ಘಕಾಲ ಶಿವಯೋಗಸಾಧನೆಯಲ್ಲಿ ಮುಳುಗಿದ್ದು ಮಧ್ಯವಯಸ್ಸು ದಾಟಿ ವೃದ್ಧಾಪ್ಯದ ಹೊಸ್ತಿಲಲ್ಲಿ ಉಭಯಭಾವ ಸಂಪೂರ್ಣವಾಗಿ ಅಳಿದ ಮೇಲೆ ಚೆನ್ನಮಲ್ಲಿಕಾರ್ಜುನನಲ್ಲಿ ನಿಜೈಕ್ಯಸಿದ್ಧಿ ಗಳಿಸಿದಳೆ ಎಂಬ ಪ್ರಶ್ನೆ ಪುಟಿಯತ್ತದೆ. ಯಾಕೆಂದರೆ ಈ ಮೇಲಿನ ವಚನ ಅಂಥ ಪ್ರಬುದ್ಧಾನುಭಾವಿ ನಿಲುವಲ್ಲಷ್ಟೆ ಹೊಮ್ಮಿರಲು ಸಾಧ್ಯ ಅನಿಸುತ್ತದೆ. ಆ ಕಾಲಘಟ್ಟದಲ್ಲಿ ಅವಳಿಂದ ರಚಿತವಾಗುತ್ತಿದ್ದ ವಚನಗಳ ತಾಳೆಗರಿಗಳು ಆಗಿಂದಾಗ್ಗೆ ಯಾತ್ರಾರ್ಥಿಗಳ ಮೂಲಕ ಉಳವಿಯ ವಚನಾಗಾರ ತಲುಪಿದುವೆ ಅಥವಾ ಅವಳ ನಿರ್ಯಾಣದ ನಂತರ ಆ ತಂಪುಗುಹೆಯಲ್ಲೇ ಅವಳ ಕೊನೆಘಟ್ಟದ ವಚನಗಳ ಕಟ್ಟು ದೊರಕಿತೆ ಎಂಬುದರ ಬಗ್ಗೆ ಸಂಶೋಧನೆ ನಡೆಯಬೇಕಿದೆ.

ಯಾವುದೆ ಘಟನೆಯ ಕಾಲಬಿಂದುಗಳನ್ನು ದೇಶಬಿಂದು ನಿರ್ದಾಕ್ಷಿಣ್ಯವಾಗಿ ದೂರವಿಟ್ಟು, ಹಂಗು ಹರಿದ ನಿರ್ಮುಕ್ತ ಅಲಖ್‌ರಂಜನ್ ಮನಃಸ್ಥಿತಿಯಲ್ಲಿ ವಚನ ರಚಿಸುವುದೆ ಸ್ವಾನುಭಾವಿ ವರಸೆ. ಎಂದೂ ಯಾವುದೆ ಭೌತಿಕ ಚೌಕಟ್ಟಿಗೂ ಒಳಪಡದ ಅನುಭಾವಿ ಆತ್ಮ ಯಾವ ತಾತ್ವಿಕ ಉಪಾಧಿಯ ಮಿತಿಗು ಒಗ್ಗದು. ಹಾಗೆ ನಿರಾಲಂಬ ನಿಂತ ನಿಲುವಲ್ಲಿ ಕಾಣುವ ಕಾಲಾತೀತ ಸತ್ಯಕ್ಕೆ ಆತ್ಯಂತಿಕ ಸಾಕ್ಷಾತ್ಕಾರದ ಸ್ವಯಂಪ್ರಭೆಯಿರುತ್ತದೆ. ಆ ನಿರಂಕುಶ ಅರಿವಿನ ನಿರಸನ ಪ್ರಜ್ಞೆ ತುಂಬ ಹರಿತವಾದುದು. ಸಕಲ ಸಂಗತಿಗಳ ತಳಮುಟ್ಟ ಸೋಸಿ ಔಚಿತ್ಯ ತೂಗಿ ನೋಡುವಷ್ಟು ಸಮರ್ಥವೂ ಸಶಕ್ತವೂ ಆಗಿರುತ್ತದೆ. 'ಚೆನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನ ಬಸವಣ್ಣನು' (ಶಿವಶರಣೆಯರ ವಚನಸಂಪುಟ ೧೯೯೩, ಸಂ: ಡಾ.ವೀ.ರಾ, ಸ.ವ.ಸಂ.೫,ಪು.೨,ವ.೨) ಎಂಬಲ್ಲಿನ ಆರ್ದ್ರಭಕ್ತಿಗು 'ಬಸವನ ಭಕ್ತಿ ಕೊಟ್ಟಣದ ಮನೆ' ಎಂಬಲ್ಲಿನ ಅಲಿಪ್ತ ಅಭಿವ್ಯಕ್ತಿಗು ಇರುವ ಧ್ವನಿ ವ್ಯತ್ಯಾಸ ಆಲಿಸಿ, ದಯವಿಟ್ಟು. ಅಲ್ಲಿನ ವಿನಯ ಇಲ್ಲಿ ಧಾರ್ಷ್ಟ್ಯವಾದಂತಿದೆ ಎನಿಸಿದರೆ ಅಚ್ಚರಿಯೇನಿಲ್ಲ ತಾನೆ? ಅಣ್ಣನೆಂದು ಅಡಿಗಡಿಗೆ ಆದರಿಸುತ್ತಿದ್ದವಳು ಆ ಕಳ್ಳುಬಳ್ಳಿ ಪ್ರತ್ಯಯ ಕಡಿದು 'ಬಸವನ ಭಕ್ತಿ' ಎಂದಿರುವದರ ಹಿಂದಿನ ಮಾನಸಾಂತರ ಗಮನಿಸಿ. ಬಸವ, ಸಿರಿಯಾಳ, ಸಿಂಧುಬಲ್ಲಾಳರ ಭಕ್ತಿಯ ಭೋಳೆತನವನ್ನು ಇಲ್ಲಿ ಹೆರೆದು ಹಾಕಲಾಗಿದೆ. 'ಮಣ್ಣಿನ ಮನೆಯ ಕಟ್ಟಿ\ ಮಾಯಾ ಮೋಹಿನಿ... ಮಹೇಂದ್ರ ಜಾಲದೊಳಗಾಗಿ\ ಮಾಡುವ ಮಾಟ' ಸಾಲುಗಳು ಪರೋಕ್ಷವಾಗಿ ಮಹಾಮನೆಯ ದಾಸೋಹ ಅನುಭಾವಗೋಷ್ಠಿಗಳನ್ನೆ ವಿಡಂಬಿಸುತ್ತಿವೆಯೆ? ನಿಜಶರಣರೊಡನೆ ಸುಳ್ಳುಶರಣರನ್ನೂ ಸಾಕುವ\ ರಕ್ಷಿಸುವ ಕೊಟ್ಟಣದ ಮನೆಯಾಗಿತ್ತೆ ಮಹಾಮನೆ ಕಡೆಕಡೆಗೆ? ಹುಸಿಹಸಿವಿನ ಶಿವತಂತ್ರಕ್ಕೆ ಬಲಿಬಿದ್ದ ಸಿರಿಯಾಳ ಹೆತ್ತ ಮಗನನ್ನೆ ಕಡಿದು ಅಟ್ಟು ಉಣಬಡಿಸಿದ್ದು ಪ್ರಾಣಿವಧೆಗೈದು ಮಾಂಸ ಮಾರುವ ಕಸಬಿಗೆ ಸಮನಾದದ್ದೆ? ಕಟ್ಟಿಕೊಂಡ ಹೆಂಡತಿಯನ್ನೆ ಸಿಂಧುಬಲ್ಲಾಳನಿಂದ ಬೇಡಿ ಅವಳೊಡನೆ ಸರಸವಾಡಿದ್ದು ಶಿವನೆ ಬಗೆದ ಪರದಾರದ್ರೋಹವಲ್ಲವೆ? ಇಷ್ಟದೈವದ ಸತ್ವಪರೀಕ್ಷೆಗೆ ಸಿಕ್ಕು ಸರ್ವಸಮರ್ಪಣೆಗೈವ

ಭೋಳೆಭಕ್ತಿಯ ನಗ್ನಸತ್ಯವನ್ನು ತೆರೆದಿಡಲಾಗಿದೆ ಇಲ್ಲಿ. ಉಳಿದ ಕೃತ್ರಿಮ ಉಪಚಾರಿ ಉದಾಸೀನ ದಾಸೋಹಿಗಳ ಅತಿವಿನಯ ಹುಸಿದೈನ್ಯಕ್ಕಂತು ಭೂತ ಸೋಂಕಿತೆಂದು(ದೆವ್ವಹಿಡಿಯಿತೆಂದು) ಮೂದಲಿಸಲಾಗಿದೆ. ಒಂದು ಸಂಸ್ಕೃತಿ\ಉಪಸಂಸ್ಕೃತಿಯ ಹಿತೈಷಿಯಂತೆ ಪ್ರಶ್ನಿಸಲು ಅದರ ಒಳಸುಳಿಗಳ ತಳಮುಟ್ಟ ತಿಳುವಳಿಕೆಯುಳ್ಳ ಒಳವಿಮರ್ಶಕರಿಗಷ್ಟೆ ಸಾಧ್ಯವೆಂಬ ಸಾಮಾಜಿಕ ಇಂಗಿತವಡಗಿದೆಯೆ, ಈ ವಚನದಲ್ಲಿ?

ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂದ ಬಸವಣ್ಣ ತನ್ನ ದೇಹವೆ ದೇಗುಲ ಎಂದು ಸಾರಿದ. ಅಲ್ಲಮ ಸಾಕಾರ ಲಿಂಗವನ್ನೆ ತೊರೆದು ನಿರಾಕಾರ ಆಕಾಶವೆ ಲಿಂಗ ಎಂದು ವಿಶ್ವಾನುಭಾವಿಯಾದ. ಆದರೆ 'ಭಕ್ತನಲ್ಲಿ ಉಂಡು ಉದ್ದಂಡ ವೃತ್ತಿಯಲ್ಲಿ ನಡೆವ' ಹುಸಿಜಂಗಮ ಶಿವಸ್ವರೂಪನಲ್ಲ ಎಂದಿರುವಳು ಅಕ್ಕ. ಅಂಥವರು 'ದೇವಲೋಕ ಮರ್ತ್ಯಲೋಕಕ್ಕೆ ಹೊರಗು' ಅಂದರೆ ಅತ್ತ ಪರಕ್ಕೂ ಸಲ್ಲದೆ, ಇತ್ತಇಹಕ್ಕೂ ಸಲ್ಲದೆ ಹೊಲಬುದಪ್ಪಿ ಹೋದವ ಎಂದರ್ಥ. ಅದ್ವಯ\ಅದ್ವೈತ ಪರಿಕಲ್ಪನೆಯನ್ನೆ ಅಪಾರ್ಥ ಮಾಡಿಕೊಂಡು ಕಲ್ಲುಕುಟಿಗ ಕಟೆದ ಲಿಂಗಕ್ಕೆ ಜೀವಕಳೆ ನೀಡುವ ನೆಪದಲ್ಲಿ ಮನುಷ್ಯ ಮಾತ್ರನು ತಾನೆ ಸಾಕ್ಷಾತ್ ಶಿವನೆಂದು (ಸಂ)ಭ್ರಮಿಸಿ ಲಿಂಗನೆತ್ತಿಗೆ ತನ್ನ ಕಾಲಿನುಂಗುಷ್ಠವೊತ್ತಿ ಶಕ್ತಿಸಂಚಾರ ಮಾಡಿಸಿದೆನೆಂದು ಬೀಗುವ ಮೂಢಾಚರಣೆಯ ಔಚಿತ್ಯವನ್ನು ಪರೋಕ್ಷವಾಗಿ ಪ್ರಶ್ನಿಸುತ್ತಿರುವಳೆ, ಅಕ್ಕ? ಇದನ್ನೆಲ್ಲ ಕಂಡೆ ಬಹುಶಃ ಅಲ್ಲಮಪ್ರಭು 'ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ' ಎಂದು ಹಳಹಳಿಸಿದನೆ? ಅದ್ವೈತ ಎಂಬುದು ಅಹಂಕಾರ ನಿರಸನದ ಅಂತಿಮ ಅರಿವಾಗಿ ಉಭಯವಳಿವ ನಿಗೂಢ ಲಿಂಗಾನುಭಾವವಾಗಬೇಕೆ ಹೊರತು ನರಮನುಷ್ಯರ ದುರಹಂಕಾರ ಪ್ರದರ್ಶನದ ಬೌದ್ಧಿಕಾಸ್ತ್ರ ಆಗಬಾರದಷ್ಟೆ?

ಬರಿ ನಾನಷ್ಟೆ ಅಲ್ಲ, ನನ್ನ ಅಖಂಡ ಭಕ್ತಿಯೆ ಇಡಿಯಾಗಿ 'ನಿನ್ನೊಳಗೈಕ್ಯವಾಯಿತ್ತಾಗಿ ನಿರ್ವಯಲಾದೆ ಕಾಣಾ' ಎಂಬಲ್ಲಿ ನಾನೇ ಅವನಾಗಿಬಿಟ್ಟೆ ಎಂದು ಬೀಗುವ ಅದ್ವೈತಬುದ್ಧಿಯಲ್ಲಿ ಪುರುಷಾಹಂಕಾರವಿಲ್ಲ; ಬದಲಿಗೆ ಅವನಪ್ಪುತ್ತಲೆ ಅವನೊಳಗೆ ಕರಗಿ ಲೀನಳಾಗಿ ನಾನೆಂಬುದೆ ಇಲ್ಲವಾಗಿ ಲಿಂಗೈಕ್ಯಳಾಗಿ ಹೋದೆ ಎಂಬ ಸ್ತ್ರೀಸಹಜ ಸರ್ವಸಮರ್ಪಣಾ ಭಾವ, ಹೆಂಗರುಳ ಸುಮಧುರ ಸ್ವಾನುಭಾವ ಇದೆ! ಇದೆ ಚೆನ್ನಮಲ್ಲಿಕಾರ್ಜುನದೇವನ ಮನದನ್ನೆ ಮಹಾದೇವಿ, ಅಸಲಿ ಅನುಭಾವಿ ಅಕ್ಕನ ಮಹಾಸಿದ್ಧಿ! □

ಹಸಿವು ತೃಷೆಯಾದಿಗಳು ಎನ್ನೊಳಗಾದ ಬಳಿಕ,
ವಿಷಯ ವಿಕಾರವೆನ್ನನಿರಿಸಿ ಹೋದವು ಕಾಣಾ ತಂದೆ.
ಅದೇ ಕಾರಣ ನೀವು ಅರಸಿಕೊಂಡು ಬಂದಿರಣ್ಣ.
ನೀವು ಅರಸುವ ಅರಕೆ – ಎನ್ನೊಳಗಾಯಿತ್ತು.
ಎನ್ನ ದೇವ ಚೆನ್ನಮಲ್ಲಿಕಾರ್ಜುನ ತನ್ನೊಳಗೆನ್ನನಿಂಬಿಟ್ಟುಕೊಂಡನಾಗಿ
ಇನ್ನು ನಿನ್ನ ತಂದೆ ತಾಯಿತನವನೊಲ್ಲೆ ನಾನು.

– ಅಕ್ಕಮಹಾದೇವಿ





# ವಚನ ರಸಪ್ರಶ್ನೆ ಸ್ಪರ್ಧೆ

## ವಚನ ರಸಪ್ರಶ್ನೆ–೩೮ರ ಸರಿಯುತ್ತರಗಳು

೧. (ಈ) ಉಗ್ಘಡಿಸುವ ಗುಬ್ಬಿದೇವಯ್ಯ ೨. (ಇ) ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ
೩. (ಆ) ಹರಿಗೋಲು ೪. (ಅ) ದೇಹ ೫. (ಇ) ಮಹಾಲಿಂಗ ಕಲ್ಲೇಶ್ವರ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ–೩೮"ರ ಉತ್ತರಗಳನ್ನು ಕಳಿಸಿದ್ದಾರೆ. ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

೧. ಶ್ರೀ ಆರ್.ಎಸ್. ಚಾಪಗಾವಿ, ಬೆಳಗಾವಿ
೨. ಶ್ರೀ ಬಿ.ಎನ್. ಸೊಲ್ಲಾಪುರೆ, ಧಾರವಾಡ

## ವಚನ ರಸಪ್ರಶ್ನೆ ~ ೩೯ರ ಪ್ರಶ್ನೆಗಳು

೧. 'ಹೆಂಡದ ಮಾರಯ್ಯ'ನ ಅಂಕಿತ ನಾಮ ಯಾವುದು?
(ಅ) ಬಸವಪ್ರಿಯ (ಆ) ಸೊಡ್ಡಳದೇವ
(ಇ) ಧರ್ಮೇಶ್ವರ ಲಿಂಗ (ಈ) ಕೂಡಲಚನ್ನಸಂಗಮದೇವ

೨. ಮನ ನಿಮ್ಮ ಬೆರಸಿದಡೆ ಬಿನದಕ್ಕೆ ಹೇಳುವನಲ್ಲ – ಈ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಸಂಗಮೇಶ್ವರದ ಅಪ್ಪಣ್ಣ (ಆ) ಸಕಲೇಶ ಮಾದರಸ
(ಇ) ಶಿವಲೆಂಕ ಮಂಚಣ್ಣ (ಈ) ವೀರ ಗೊಲ್ಲಾಳ

೩. 'ಲಲಾಮಭೀಮಸಂಗಮೇಶ್ವರಲಿಂಗ' – ಇದು ಯಾರ ಅಂಕಿತನಾಮ?
(ಅ) ವೇದಮೂರ್ತಿ ಸಂಗಣ್ಣ (ಆ) ವಿಶ್ವಪತಿ ವಿಶ್ವನಾಥ
(ಇ) ನಿರಾಳಪ್ರಿಯ ಸೊಡ್ಡಳಯ್ಯ (ಈ) ಹಾವಿನಹಾಳ ಕಲ್ಲಯ್ಯ

೪. 'ಅರತ' ಪದದ ಅರ್ಥ
(ಅ) ಹೂವು (ಆ) ಕತ್ತರಿಸು
(ಇ) ಪ್ರೀತಿ (ಈ) ಒಣಗಿದ

೫. 'ಹೆಂಪು' ಪದದ ಅರ್ಥ
(ಅ) ಕನಿಷ್ಠ (ಆ) ಶ್ರೇಷ್ಠ
(ಇ) ಹಿಂದೆ (ಈ) ಮುಂದೆ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು–೫೬೦೦೭೦.

# ಅಗಣಿತ

ಡಾ. ಅಮರೇಶ ನುಗಡೋಣಿ

**ಬೆ**ಳೆಯ ಭೂಮಿಯಲ್ಲೊಂದು ಪ್ರಳಯದ ಕಸ ಹುಟ್ಟಿ
ತಿಳಿಯಲೀಯದು, ಎಚ್ಚರಲೀಯದು
ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ, ಲಿಂಗತಂದೆ
ಸುಳಿದೆಗೆದು ಬೆಳೆವೆನು ಕೂಡಲಸಂಗಮದೇವಾ

– ಬಸವಣ್ಣ

ವ್ಯವಸಾಯದಿಂದ ದೂರ ಸರಿಯುತ್ತಿದೆ ಸಮಾಜ. ಇಂಥ ಸಮಾಜ ಈಗ ಗ್ರಾಮಗಳಲ್ಲೂ ಮಾಯವಾಗುತ್ತಿದೆ. ನಗರದಲ್ಲಿ ಸಹಜವಾಗಿಯಿಲ್ಲ. ರೂಪಕದ ಈ ವಚನ ಒಂದು ಚಿತ್ರಣವನ್ನಂತೂ ನೀಡಿದೆ. ಹೊಲದಲ್ಲಿ ಯಾವುದೇ ಬೆಳೆಯನ್ನು ಬಿತ್ತಿದರೂ, ಬಿತ್ತಿದ ಬೆಳೆ ಮಾತ್ರ ಸಸಿಯಾಗಿ ಬೆಳೆಯುವುದಿಲ್ಲ. ಜತೆಗೆ ಬಿತ್ತದಿದ್ದರೂ ಕಸ ಬಲವಾಗಿ ಬೆಳೆಯುತ್ತದೆ. ಕಸ ಎಂದರೆ ಕಳೆ. ಬೆಳೆಗೆ ಬೇಡವಾದ ಕಳೆ. ಬಿತ್ತಿದ ಬೆಳೆ ಸಾಲಿಡಿದು ಬೆಳೆಯುತ್ತದೆ. ಕಳೆ ಮಾತ್ರ ಒಂದಿಚೂ ಬಿಡದೆ ಹುಟ್ಟಿ ಬೆಳೆಯುತ್ತದೆ. ಬಯಲುಸೀಮೆಯ ಹೊಲಗಳಲ್ಲಿ ಮುಂಗಾರು, ಹಿಂಗಾರಿನ ಬಿತ್ತನೆಯ ಖುಷಿಯೊಂದು ಕಡೆಗಿದ್ದರೆ, ಕಳೆ ಬೆಳೆಯುವ ಸಂಕಟ ಇನ್ನೊಂದು ಕಡೆ. ಇದನ್ನು ರೈತ ಅನುಭವಿಸುತ್ತಾನೆ. ಮಲೆನಾಡಿನಲ್ಲಿ ಮಳೆಗಾಲದ ಕಾಲದಲ್ಲಿ, ಮಳೆ ಬೀಳುವ ಅವಧಿಯಲ್ಲಿ ವಿಪರೀತ ಕಳೆ ಎಲ್ಲೆಂದರಲ್ಲಿ ಬೆಳೆದು ತಲೆ ಎತ್ತಿ ನಿಲ್ಲುತ್ತದೆ. ಇದನ್ನೇ 'ಪ್ರಳಯದ ಕಸ' ಎನ್ನಲಾಗಿದೆ. ಬೆಳೆಯನ್ನು ಸರ್ವನಾಶ ಮಾಡುವ ಕಳೆಯಾದ್ದರಿಂದ ಇದು ಪ್ರಳಯದ ಕಸ.

'ತಿಳಿಯಲೀಯದು, ಎಚ್ಚರಲೀಯದು' ಬೆಳೆಯುವ ಪೈರನ್ನು ಮುಚ್ಚಿ ಹಾಕಿ ಕಳೆ ಬೆಳೆದರೆ, ಗಿಡಕ್ಕೆ ಗಾಳಿ, ಬಿಸಿಲು ತಗುಲದಂತಾಗುತ್ತದೆ. ಬೆಳೆ ಉಸಿರು ಗಟ್ಟಿ ಕುಗ್ಗುತ್ತದೆ. ಅದರ ಪಾಲಿಗೆ ಕುಗ್ಗುವುದು ಮಾತ್ರ ಉಳಿಯುತ್ತದೆ.

ವಚನ ಇಲ್ಲಿಂದ ಬೇರೆ ವಿಷಯಕ್ಕೆ ಹೊರಳುತ್ತದೆ. ಆದರೆ ಪೂರಕವಾಗಿ ಬೆಳೆಯುತ್ತದೆ. 'ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯ' ಎಂಬ ಸಾಲು ವ್ಯಕ್ತಿಯನ್ನು ಅನುಲಕ್ಷಿಸಿದೆ. ವ್ಯಕ್ತಿಯೂ ಹುಟ್ಟುತ್ತಾನೆ, ಬೆಳೆಯುತ್ತಾನೆ. ಗುಣಾವಗುಣಗಳೊಂದಿಗೆ ಅರಳುತ್ತಾನೆ. ಒಳ್ಳೆಯ ಗುಣದ ಪ್ರಮಾಣಕ್ಕಿಂತ ಕೆಟ್ಟ ಗುಣಗಳ ಪ್ರಮಾಣ ಕಸದಂತೆ ದೊಡ್ಡದಾಗುತ್ತ ಒಳ್ಳೆಯ

'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ - ೫೮೩ ೨೦೧ ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೬



ಗುಣವನ್ನು ಮುಚ್ಚಿ ಹಾಕುತ್ತದೆ. ಅವಗುಣವನ್ನು ಕಿತ್ತುಹಾಕುವ ಶಕ್ತಿ ವ್ಯಕ್ತಿ ಬೆಳೆಯುವ ಪರಿಸರದಲ್ಲಿರುತ್ತದೆ. ಒಳ್ಳೆಯ ಪರಿಸರದಲ್ಲಿ ವ್ಯಕ್ತಿ ಬೆಳೆಯುತ್ತಿದ್ದರೆ, ಆ ಪರಿಸರವೇ ಅವನನ್ನು ಸಲಹುತ್ತದೆ. "ಬೆಳೆಯುವ ಪೈರು ಮೊಳಕೆಯಲ್ಲಿ" ಕಾಣುತ್ತದೆ ಎನ್ನುವ ನಾಡನುಡಿಯ ಅರ್ಥ ಇದೇ. ಅವಗುಣವೆಂಬ ಕಳೆಯನ್ನು ತೆಗೆದರೆ ಮಾತ್ರ ಒಳ್ಳೆಯ ಗುಣಗಳಿಗೆ ಬೆಳೆಯಲು ಅವಕಾಶ ಸಿಗುತ್ತದೆ.

ಅವಗುಣಗಳನ್ನು ವ್ಯಕ್ತಿಯಿಂದ ತೆಗೆದರೆ, ಬೆಳೆಯುವ ಪೈರಿನಲ್ಲಿರುವ ಕಸವನ್ನು ಕಿತ್ತು ಹಸನಗೊಳಿಸಿದರೆ 'ಸುಳಿದೆಗೆದು' ಆತ ಬೆಳೆಯಲು ಸಾಧ್ಯವಾಗುತ್ತದೆ. 'ಸುಳಿದೆಗೆದು ಬೆಳೆಯುವೆನು' ಎಂಬಲ್ಲಿ ಎಂತಹ ಹಂಬಲವಿದೆ. ಉತ್ಸಾಹವಿದೆ ಎಂಬುದು ಅರಿವಿಗೆ ಬರುತ್ತದೆ. ಕಸಕಳೆಯನ್ನು ತುಳಿದು ಬೆಳೆದರೆ ಬೆಳೆಯದೇ ಆಟ. ಹಾಗೆಯೇ ವ್ಯಕ್ತಿಯಲ್ಲಿ ಕಳೆಯಂತೆ ತುಂಬುವ ಅವಗುಣಗಳನ್ನು ಇಲ್ಲವಾಗಿಸಿದರೆ ಸಾತ್ವಿಕತೆಯೇ 'ಸುಳಿದೆಗೆದು ಬೆಳೆಯುವಂತೆ' ಬೆಳೆಯುತ್ತದೆ, ಬೆಳೆಸುತ್ತದೆ. ಅಂಥ ಸಾತ್ವಿಕದ ಬೆಳೆ ವ್ಯಕ್ತಿಯಲ್ಲಿ ಬೆಳೆದರೆ ಅಂತಹವರು ಶರಣರಾಗುತ್ತಾರೆ. □

ಹಾಲಹಿಡಿದು ಬೆಣ್ಣೆಯನರಸಲುಂಟೆ ?
ಲಿಂಗವಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ ?
ಲಿಂಗದ ಪಾದತೀರ್ಥ ಪ್ರಸಾದವ ಕೊಂಡು
ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ ?
ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದೆನಾದಡೆ
ತಡೆಯದೆ ಹುಟ್ಟಿಸುವನು ಶ್ವಾನನ ಗರ್ಭದಲ್ಲಿ.
ಅದೆಂತೆಂದಡೆ ಶಿವಧರ್ಮಪುರಾಣದಲ್ಲಿ
'ಇಷ್ಟಲಿಂಗಮವಿಶ್ವಸ್ಯ ತೀರ್ಥಲಿಂಗಸ್ಯ ಪೂಜಕಃ ?
ಶ್ವಾನಯೋನಿಶತಂ ಗತ್ವಾ ಚಾಂಡಾಲಗೃಹಮಾಚರೇತ್' ॥ ಎಂದುದಾಗಿ,
ಇದನರಿದು ಗುರು ಕೊಟ್ಟ ಲಿಂಗದಲ್ಲಿಯೆ ಎಲ್ಲಾ ತೀರ್ಥಂಗಳೂ
ಎಲ್ಲಾ ಕ್ಷೇತ್ರಂಗಳೂ ಇದ್ದಾವೆಂದು ಭಾವಿಸಿ ಮುಕ್ತರಪ್ಪುದಯ್ಯಾ.
ಇಂತಲ್ಲದೆ ಗುರು ಕೊಟ್ಟ ಲಿಂಗವ ಕಿರಿದುಮಾಡಿ,
ತೀರ್ಥಲಿಂಗವ ಹಿರಿದುಮಾಡಿ ಹೋದಾತಂಗೆ
ಅಘೋರ ನರಕ ತಪ್ಪದು ಕಾಣಾ ಚೆನ್ನಮಲ್ಲಿಕಾರ್ಜುನಾ.

– ಅಕ್ಕಮಹಾದೇವಿ

# ಅನುಭಾವದ ಅಭಿವ್ಯಕ್ತಿಯಾಗಿ ವಚನಗಳು

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**

## ಅನುಭಾವ ಮತ್ತು ಭಾಷೆ – ಭಾಗ ೪

**ಅ**ಕ್ಕನೂ ಸೇರಿದಂತೆ ಎಲ್ಲ ಅನುಭಾವಿಗಳು ತಮ್ಮ ರಚನೆಯಲ್ಲಿ ತಮ್ಮ ಕಾಲದ ಸಮಾಜ, ಭಾಷೆ ಕಟ್ಟಿಕೊಂಡಿದ್ದ ಅರ್ಥರಚನೆಗಳನ್ನು ಬಿಡಿಸಿ ಮುಕ್ತ ಸ್ಥಿತಿಯನ್ನು ಪಡೆಯುವ ಅಪೇಕ್ಷೆಯವರೇ ಆಗಿ ಕಾಣುತ್ತಾರೆ. ಗುಹೇಶ್ವರ ಎಲ್ಲೂ ಇಲ್ಲ, ಗುಹೇಶ್ವರನೆಂಬ ಶಬ್ದ ಸಿನೆ ಬಂಜೆ, ಅನ್ನುವಂಥ ಮಾತುಗಳು ಅಲ್ಲಮನಲ್ಲಿ ಎದುರಾಗುತ್ತವೆ. ಶಬ್ದಮುಗ್ಧ, ಶಿಶು ಕಂಡ ಕನಸು, ಬೆಲ್ಲವನ್ನು ಸವಿದ ಮೂಗ ಅನ್ನುವಂಥ ಮಾತುಗಳು ಅನುಭಾವದ ಅಭಿವ್ಯಕ್ತಿಯನ್ನು ಕುರಿತು ಹಲವೆಡೆಗಳಲ್ಲಿ ಕಾಣುತ್ತವೆ. ಇವನ್ನೆಲ್ಲ ಒಟ್ಟಾಗಿ ಗಮನಿಸಿದರೆ ಅನುಭಾವಿಗಳು ಬಯಸುವ ಮುಕ್ತತೆ ಮನಸ್ಸು ಕಟ್ಟಿಕೊಂಡಿರುವ ಸ್ಥಾವರವಾಗಿರುವ ಅರ್ಥರಚನೆಗಳಿಂದ ಪಡೆಯಬೇಕಾದ ಮುಕ್ತತೆ ಅನಿಸುತ್ತದೆ. ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಹೇಳುವುದಾದರೆ ಮುಕ್ತಿ ಅಥವಾ ಬಿಡುಗಡೆ ಎಂದರೆ ನಮ್ಮ ಮನಸ್ಸು ಭಾಷೆಯಿಂದ ದತ್ತವಾದ ಅರ್ಥಬಂಧನದಿಂದ ಬಿಡಿಸಿಕೊಳ್ಳುವುದು ಅನಿಸುತ್ತದೆ. ಮುಕ್ತಿ ಎಂದರೆ ಅರ್ಥದ ಕಟ್ಟುಗಳಿಂದ ಪಡೆದ ಬಿಡುಗಡೆ.

ಹಾಗಾಗಿ ನಿರಾಕರಣೆ ಅನ್ನುವುದು ಅನುಭಾವಿಗಳ ಭಾಷೆಯ ಮುಖ್ಯ ಲಕ್ಷಣವಾಗುತ್ತದೆ. ಹಿಂದಿಯಲ್ಲಿ ಕಬೀರ, ಕನ್ನಡದಲ್ಲಿ ಅಲ್ಲಮ, ಬಂಗಾಳಿಯಲ್ಲಿ ಲಾಲನ್ ಶಾಹ್, ಇಂಥವರು ನಿರ್ಗುಣ ಕವಿಗಳು. ದೇವರಿಗೆ ರೂಪವಿಲ್ಲ, ಶಬ್ದಗಳಾಚೆ ಇರುವವನು ಎಂದು ನಂಬಿದವರು. ನಾಮರೂಪಗಳು, ದೇವರಿಗೆ ನಾವು ಇಡುವ ಹೆಸರು, ಕೊಡುವ ರೂಪಗಳು ಮನುಷ್ಯಲೋಕದ ಮಿತಿಗೆ ಒಳಪಟ್ಟ ಭ್ರಮೆಗಳನ್ನು ಸೃಷ್ಟಿಸುತ್ತವೆ ಎಂಬ ನಿಲುವು ತಾಳುತ್ತಾರೆ. ಹಾಗಾಗಿ 'ಆನಂದೋನ್ಮಾದದ ಉಪಾಯ'ಗಳಾದ ಮಂತ್ರ, ತಂತ್ರ, ಇತ್ಯಾದಿಗಳು, ಮತ ಧರ್ಮಶಾಸ್ತ್ರ ಹಾಗೂ ಶಾಸ್ತ್ರಗಳಂಥ ಚಿಂತನೆ ಮತ್ತು ಆಲೋಚನೆಗಳ ವ್ಯವಸ್ಥೆಗಳು, ವೇದ, ಭಾಷೆ, ಕಾವ್ಯ, ಅಲಂಕಾರ, ಪುರಾಣ – ಅಂದರೆ ಚಿಂತಕರು, ಕವಿಗಳು, ಧಾರ್ಮಿಕರು ಬೆಲೆಯುಳ್ಳವೆಂದು ಭಾವಿಸುವಂಥವೆಲ್ಲ ಅವರಿಗೆ ನಿರುಪಯುಕ್ತವಾಗಿ, ನೀಗಿಕೊಳ್ಳಬೇಕಾದ, ನಿರಾಕರಿಸಬೇಕಾದ ಸಂಗತಿಗಳಾಗಿ ಕಾಣುತ್ತವೆ. ಆದರೂ ಸ್ವಲ್ಪ ಮೊದಲು ಹೇಳಿದಂತೆ

ನಂ. ೯೯, ಹಿಮಾಲಯ, ೫ನೆ ಮುಖ್ಯರಸ್ತೆ, ಅರವಿಂದ ನಗರ, ಮೈಸೂರು ೫೭೦ ೦೨೩
ಮೊ: ೯೪೮೦೩ ೭೯೮೩೭



ನಿರಾಕರಣೆ ಕೂಡ ಭಾಷೆಯ ರೂಪದಲ್ಲೇ ವ್ಯಕ್ತವಾಗಬೇಕು. ಹಾಗಾಗಿ ಭಾಷೆಯನ್ನು ಕುರಿತು ಸಂಶಯ, ತಿರಸ್ಕಾರಗಳೊಂದಿಗೇ (ಶಬ್ದ ಸೂತಕ ಇತ್ಯಾದಿ) ಭಾಷೆಯ ಅನಿವಾರ್ಯತೆ (ನುಡಿಯ ಒಳಗಾಗಿ ನಡೆಯಬೇಕು) ಮತ್ತು ಭಾಷೆ ಹೇಗಿರಬೇಕೆಂಬ ಆದರ್ಶದ ಕಲ್ಪನೆಯೂ (ನುಡಿಗೆಟ್ಟ ನುಡಿ, ಅಂದರೆ ಮೌನ; ಸ್ಫಟಿಕದ ಶಲಾಕೆ) ಕಾಣುತ್ತದೆ.

ಎ.ಕೆ. ರಾಮಾನುಜನ್ ಅವರು ಅಲ್ಲಮನ ವಚನಗಳನ್ನು ಪರಿಶೀಲಿಸುತ್ತ ಅನುಭಾವದ ಭಾಷೆಗೂ ಒಂದು ಪರಂಪರೆ ಇತ್ತು ಅನ್ನುವ ಮತ್ತು ಅನುಭಾವದ ನುಡಿಗಳನ್ನು ಹೇಗೆ ನಮ್ಮೊಳಗು ಮಾಡಿಕೊಳ್ಳಬೇಕು ಎಂಬ ಎರಡು ಮುಖ್ಯ ಸಂಗತಿಗಳನ್ನು ಗಮನಿಸಿದ್ದಾರೆ. 'ಸಾಮಾಜಿಕ, ಬೌದ್ಧಿಕ ಮತ್ತು ಧಾರ್ಮಿಕ ರಚನೆಗಳನ್ನೆಲ್ಲ ಪೂರ್ಣವಾಗಿ ನಿರ್ಲಕ್ಷಿಸಿದ ತೀವ್ರಗಾಮಿಯೆಂದರೆ ಅಲ್ಲಮಪ್ರಭು. ನಾಲ್ವರು ಪ್ರಮುಖ ವೀರಶೈವ ಶರಣರಲ್ಲಿ (ಬಸವಣ್ಣ, ಜೇಡರ ದಾಸಿಮಯ್ಯ, ಮಹಾದೇವಿಯಕ್ಕ, ಅಲ್ಲಮಪ್ರಭು) ಅವನು ಮಾತ್ರವೇ ಬೆಡಗಿನ ವಚನಗಳನ್ನು ರಚಿಸಿದ್ದಾನೆ. ಅಸ್ಪಷ್ಟ ಒಗಟುಗಳಂತಿರುವ ಈ ಕವಿತೆಗಳು, ಪ್ರಾಚೀನವೂ ಅಖಿಲ ಭಾರತೀಯವೂ ಆದ ಸಂಧ್ಯಾಭಾಷಾ ಅಥವಾ ಉಲ್ಟೀ ಭಾಷಾದ (ತಲೆಕೆಳಗು ಭಾಷೆ) ಸಂಪ್ರದಾಯದಲ್ಲಿ ಪಾಲ್ಗೊಳ್ಳುತ್ತವೆ. ಈ ಬಗೆಯ ನಿದರ್ಶನಗಳು ವೇದ, ಉಪನಿಷತ್ತುಗಳಷ್ಟು ಪ್ರಾಚೀನವಾದವು, ದೇಶ ಭಾಷೆಗಳಲ್ಲಿ ಚರ್ಯಾಗೀತಿಗಳಷ್ಟು ಹಳೆಯವು. ಅಲ್ಲಮನ ರಚನೆಗಳು ಬಹುಶಃ ಚರ್ಯಾಗೀತಗಳಿಗಿಂತ ಹಿಂದಿನವು. ವಿಚಾರಗಳು, ಆಶಯಗಳು, ವಿರೋಧಾಭಾಸಗಳು, ಪ್ರತೀಕಗಳು, ಕಾವ್ಯಪ್ರಕಾರಗಳನ್ನೆಲ್ಲ ಒಳಗೊಂಡಿದ್ದ ನಾಥ ಮತ್ತಿತರ ಗೂಢಸಂಪ್ರದಾಯಗಳ ವಿಶಾಲವಾದ ರಾಶಿಯೊಂದಿತ್ತು, ಅಲ್ಲಮನಂಥ ಕವಿಗಳು ತಮ್ಮ ರಚನೆಗಳನ್ನು ಅದರಲ್ಲಿ ಅದ್ದಿ ಹರಳುಗಳನ್ನು ಹಕ್ಕಳೆ ಕಟ್ಟಿಸಿ ಮೇಲೆತ್ತಿಕೊಂಡರು ಎಂದು ಊಹಿಸುತ್ತೇನೆ. ಆದ್ದರಿಂದಲೇ ಸುಪ್ತಪ್ರಜ್ಞೆಯನ್ನು ಪ್ರಚೋದಿಸಲು ಅವರು ಆಧುನಿಕ ರ್‍ರಿಯಲಿಸ್ಟರಂತೆ ಕನಸು, ಸ್ವಚ್ಛಂದ ಬರವಣಿಗೆ, ಔಿವಿಜಾ ಹಲಗೆ ಇತ್ಯಾದಿಗಳನ್ನು ಅವಲಂಬಿಸಲಿಲ್ಲ. ಅಲ್ಲಮ, ಕಬೀರ, ತಮಿಳಿನ ಸಿದ್ಧರು ಇವರಿಗೆಲ್ಲ ತಮ್ಮ ಮೊದಲ ಭಾಷೆ ಕನ್ನಡ, ಭೋಜಪುರಿ ಅಥವಾ ತಮಿಳಿಗಿಂತ ಬೇರೆಯಾದ ದ್ವಿತೀಯ ಭಾಷೆಯೊಂದು ಕೈಯಳತೆಯಲ್ಲೇ ಇತ್ತು. ಈ ದ್ವಿತೀಯ ಭಾಷೆಯು ಯೋಗ, ತಂತ್ರ, ನಾಥ, ವ್ಯವಸ್ಥೆ ಮತ್ತು ತಂತ್ರಗಳನ್ನು ನಿರಾಕರಿಸಿದರೂ ಅವುಗಳ ಪ್ರತೀಕಗಳನ್ನು ಬಳಸಿಕೊಳ್ಳುತ್ತಿತ್ತು' ಎನ್ನುತ್ತಾರೆ ರಾಮಾನುಜನ್.

ಕಾಯದಲಾದ ಮೂರ್ತಿಯಲ್ಲ, ಜೀವದಲಾದ ಮೂರ್ತಿಯಲ್ಲ
ಪ್ರಾಣದಲಾದ ಮೂರ್ತಿಯಲ್ಲ, ಪುಣ್ಯದಲಾದ ಮೂರ್ತಿಯಲ್ಲ
ಮುಕ್ತಿಯಲಾದ ಮೂರ್ತಿಯಲ್ಲ, ಯುಗದಲಾದ ಮೂರ್ತಿಯಲ್ಲ
ಜುಗದಲಾದ ಮೂರ್ತಿಯಲ್ಲ, ಶಿವನಲಾದ ಮೂರ್ತಿಯಲ್ಲ
ಶಕ್ತಿಯಲಾದ ಮೂರ್ತಿಯಲ್ಲ, ಇದೆಂತಹ ಮೂರ್ತಿಯೆಂದು ಉಪಮಿಸುವೆ!
ಕಾಣಬಾರದ ತೇಜ, ನೋಡಬಾರದ ತೇಜ

ಉಪಮಿಸಬಾರದ ನಿಲವು,
ಕಾರಣವಿಡಿದು ಕಂಗೆ ಗೋಚರವಾದ ಸುಖವನೇನೆಂದು ಹೇಳುವೆ ಗೊಹೇಶ್ವರ
[ಸಂಪುಟ ೨, ವಚನ ೨]

ಅಲ್ಲಮನ ಈ ನುಡಿ ಕಾಯ, ಉಸಿರು, ಪುಣ್ಯ, ಮುಕ್ತಿ, ಯುಗ, ಶಿವ, ಶಕ್ತಿ, ದರ್ಶನ, ರೂಪಕ, ಕೊನೆಗೆ ತಾರ್ಕಿಕ ಕಾರಣ, ಇಂಥ ಎಲ್ಲ ಸಾಂಸ್ಕೃತಿಕ ಪರಿಕಲ್ಪನೆಗಳನ್ನೂ ನಿರಾಕರಿಸಿ ತಿರಸ್ಕರಿಸುತ್ತದೆ. ಈ ವಚನವು 'ಸುಖ'ವನ್ನು ನಿರಾಕರಣೆಗಳ ಮೂಲಕ ನಿರ್ವಚಿಸುತ್ತದೆ; ಇಲ್ಲಿ ಸುಖವನ್ನು ವಿವರಿಸಿಲ್ಲ, ಬದಲಾಗಿ ಸುಖವು ತಾನು ಏನಲ್ಲವೋ ಅದೆಲ್ಲದರಿಂದ ಆವೃತ್ತವಾಗಿದೆ, ಅಂಥವುಗಳ ನಿರಾಕರಣೆಯೊಂದೇ ಆ ಸುಖವನ್ನು ಪಡೆಯುವ ದಾರಿ ಅನ್ನುವಂತಿದೆ.

ಅನುಭಾವಕ್ಕೆ ಪೂರ್ವನಿದರ್ಶನವಿಲ್ಲ, ಮಾದರಿಗಳಿಲ್ಲ.
ಮುನ್ನಿನ ಪರಿಯಂತುಟಲ್ಲ. ಆದಡಿಂತಹುದೆ?
ಆಗದಡಿಂತಾಯಿತ್ತು.
ಹಲವು ದೆಸೆಯ ಬಯಕೆ ತಾರ್ಕಣೆಗಂಡಂತೆ
ಗುಹೇಶ್ವರ ಲಿಂಗವು ತನುವ ತನ್ನತ್ತಲೊಯ್ದನು [ಸಂಪುಟ ೨, ವಚನ ೮೧]

ಅದು ಹಿಂದೆ ಸಂಭವಿಸಿದುದಲ್ಲವಾದುದರಿಂದ ಅದಕ್ಕೆ ಯಾವ ಭಾಷೆಯೂ ಇಲ್ಲ.
ಕಾಣಬಾರದ ಲಿಂಗವೆನ್ನ ಕರಸ್ಥಲಕ್ಕೆ ಬಂದರೆ
ಹೇಳಲಮ್ಮೆ, ಕೇಳಲಮ್ಮೆ.
ಎನಗಿದು ಸೋಜಿಗ, ಎನಗಿದು ಸೋಜಿಗ!
ಗುಹೇಶ್ವರನೆಂಬ ಲಿಂಗ ನಿರಾಕಾರ ಬಯಲು
ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ, ಕೇಳಲಮ್ಮೆ
[ಸಂಪುಟ ೨, ವಚನ ೬೧]

ಅನುಭಾವಿಗಳು ಧಾರ್ಮಿಕ ವ್ಯಕ್ತಿಗಳಾಗಿ ದೇವರನ್ನು ನಿರ್ಗುಣವಾಗಿ ಕಂಡರೂ ಪ್ರತಿಮೆ, ಭಾಷೆ, ಗುಣಗಳ ಸೂಚನೆ, ಇತ್ಯಾದಿಯಾಗಿ ಈ ಲೋಕದ ಸಾಮಗ್ರಿಗಳನ್ನು, ನಿರ್ಗುಣಿಗಳಾಗಿ ತಾವೇನನ್ನು ನಿರಾಕರಿಸುತ್ತಾರೋ ಅದೆಲ್ಲವನ್ನೂ ಬಳಸಲೇಬೇಕು. ಅನುಭಾವಿಗಳಾಗಿ ತಾವೇ ನಿರಾಕರಿಸುವ ಸಂಗತಿಯನ್ನು ತಾವು ನುಡಿಯಲು ಹೊರಟಾಗ ಉಪಯೋಗಿಸಲೇಬೇಕು. ಈ ಸಂದಿಗ್ಧವನ್ನು [ಬೇಕಿದ್ದರೆ ವಿಪರ್ಯಾಸವೆನ್ನಿ], ಮೀರಲು ಅಲ್ಲಮನಂಥ ಅನುಭಾವಿಗಳು ತಮ್ಮ ನುಡಿಯಲ್ಲಿ ರಚನೆಗೊಂಡ ಅರ್ಥವನ್ನು ಅಲ್ಲಲ್ಲೇ ಅಳಿಸಿಹಾಕುವ ಪ್ರಯತ್ನವನ್ನೂ ಮಾಡುತ್ತಾರೆ. ಅರ್ಥವನ್ನು ರಚಿಸುತ್ತಿರುವಾಗಲೇ ಬಿಡಿಸಿ ಚೆದುರಿಸುತ್ತಲೂ ಇರುತ್ತಾರೆ. ಈ ಸುಪ್ರಸಿದ್ಧ ವಚನವನ್ನು ನೋಡಿ:

ನಿಮ್ಮ ತೇಜವ ನೋಡಲೆಂದು ಹೆರಸಾರಿ ನೋಡುತ್ತಿರಲು





ಶತಕೋಟಿ ಸೂರ್ಯರು ಮೂಡಿದಂತಿರ್ದುದಯ್ಯ
ಮಿಂಚಿನ ಬಳ್ಳಿಯ ಸಂಚವ ಕಂಡೆ. ಎನಗಿದು ಸೋಜಿಗವಾಯಿತ್ತು!
ಗೊಹೇಶ್ವರ, ನೀನು ಜ್ಯೋತಿರ್ಲಿಂಗವಾದರೆ ಉಪಮಿಸಿ ನೋಡಬಲ್ಲವರಿಲ್ಲಯ್ಯ
[ಸಂಪುಟ ೨, ೧೩೦೨]

ಈ ವಚನದಲ್ಲಿ 'ಶತಕೋಟಿಸೂರ್ಯರು' ಅನ್ನುತ್ತಾ ಉಪಮೆವನ್ನು ನಿರ್ಮಿಸಿದ ಮರುಗಳಿಗೆಯಲ್ಲೇ ಉಪಮಿಸಿ ನೋಡಬಲ್ಲವರಿಲ್ಲ ಎನ್ನುತ್ತ ಉಪಮೆಯನ್ನು ಅಲ್ಲಗಳೆಯಲಾಗಿದೆ.

ಇಂಥ ನುಡಿರಚನೆಯನ್ನು ಅಲ್ಲಮನಂಥ ಅನುಭಾವಿಗಳ ಕಾಲ ಮುಗಿದು ಸುಮಾರು ಸಾವಿರ ವರ್ಷದ ನಂತರ ಈಗ ನಾವು ಹೇಗೆ ನಮ್ಮದು ಮಾಡಿಕೊಳ್ಳಬಹುದು? ಅನುಭಾವಿಯ ನುಡಿಯನ್ನು ಕಿವಿಯಾರೆ ಕೇಳುವ ವ್ಯಕ್ತಿ ಹೇಗೆ ನಾಟಕೀಯವಾಗಿ ಆ ನುಡಿಯ ಪರಿಣಾಮಕ್ಕೆ ಸಿಕ್ಕಿ, ಅರ್ಥಗಳನ್ನೆಲ್ಲ ನಿರಾಕರಿಸುತ್ತ, ಪ್ರಜ್ಞೆಯ ಪಲ್ಲಟವನ್ನು ಅನುಭವಿಸಬಹುದೋ ನಾವು ಹಾಗೆಯೇ ನಿಗದಿತ ಅರ್ಥಗಳನ್ನು ತ್ಯಜಿಸಿ ಪ್ರಜ್ಞೆಯ ಪಲ್ಲಟದ ತಳಮಳಕ್ಕೆ ಸಿದ್ಧವಾಗಬೇಕಾಗುತ್ತದೆ; ಇಂಥ ನುಡಿಯನ್ನು ನುಡಿದ ಪ್ರಜ್ಞೆ ಎಂಥದೆಂಬ ಬೆರಗಿನಲ್ಲಿ ಆ ಪ್ರಜ್ಞೆಯ ದೃಷ್ಟಿಯಿಂದ ಕಣ್ಣೆದುರಿಗಿರುವುದನ್ನು ಕಾಣಲು ಯತ್ನಿಸಬೇಕಾಗುತ್ತದೆ.

ಆನೆಯ ಹೆಣ ಬಿದ್ದಿರೆ ಕೋಡಗ ಮುದ್ದಾಡಿಸಿತ್ತ ಕಂಡೆ
ಕಾಡೊಳಗುಳ್ಳ ಸೂಳೆ ಕರೆದೊತ್ತೆಯ ಕೊಂಬುದ ಕಂಡೆ
ಹಾಳೂರೊಳಗೆ ನಾಯಿ ಜಗಳವ ಕಂಡೆ
ಇದೇನು ಸೋಜಿಗ ಹೇಳಾ ಗುಹೇಶ್ವರ [ಸಂಪುಟ ೨, ವಚನ ೪೯]

'ಮನಸೆಂಬ ಕೋಡಗ ಅಹಂಕಾರವೆಂಬ ಹೆಣವನ್ನು ಮುದ್ದಾಡುತಿದೆ; ಸಂಸಾರವೆಂಬ ಕಾಡಿನೊಳಗೆ ಮಾಯೆ ಜನರನ್ನೆಲ್ಲ ಮರುಳುಮಾಡುತಿದೆ; ಪಂಚಭೂತದೇಹಗ್ರಾಮ, ಇಂದ್ರಿಯಗಳೆಂಬ ನಾಯಿಗಳು ಸಂಘರ್ಷಗಳನ್ನು ಹುಟ್ಟುಹಾಕುತಿವೆ' ಅನ್ನುವುದು ಸಾಮಾನ್ಯವಾಗಿ ಈ ವಚನಕ್ಕೆ ದೊರೆಯುವ ವಿವರಣೆ.

ಕೋಡಗ=ಮನಸ್ಸು, ನಾಯಿಗಳು=ಇಂದ್ರಿಯಗಳು, ಹೆಣ=ಅಹಂಕಾರದ ಲೌಕಿಕ ಬದುಕು ಇತ್ಯಾದಿಯಾಗಿ ಕವಿತೆಯನ್ನು ಅನ್ಯೋಕ್ತಿಯಾಗಿಸುವ ಇಂಥ ಕೋಷ್ಟಕಗಳು ಪ್ರತಿಮೆಗಳನ್ನು ವಾಚ್ಯವಾಗಿ ಪರಿವರ್ತಿಸಿ 'ಒಗಟಿಗೆ ಉತ್ತರಗಳನ್ನು' ಒದಗಿಸಿ ಸುಮ್ಮನಾಗುತ್ತವೆ. ರಾಮಾನುಜನ್ ಅವರ ಮಾತಿನಲ್ಲಿ ಹೇಳುವುದಾದರೆ ಇಂಥ ವ್ಯಾಖ್ಯಾನಗಳು 'ಅನುಭವಾತ್ಮಕವಾದ ಘಟನೆಯನ್ನು ಸಂಸ್ಕೃತಿಸಾಮಾನ್ಯವಾದ ಚಲಾವಣೆಯ ಮಾಮೂಲು ನಾಣ್ಯವಾಗಿಸುತ್ತದೆ'.

'ಕ್ಷಾಮದಿಂದಲೋ ಯುದ್ಧದಿಂದಲೋ ಹಾಳು ಸುರಿಯುತ್ತಿರುವ ಊರಿನ ಮೂರು ಚಿತ್ರಗಳಿವೆ. ಊರಿನ ಚಿತ್ರ ನಾಟಕೀಯವಾಗಿ ಕವಿತೆಯ ಕೊನೆಗೆ ಬಂದಿದೆ. ಕೇವಲ ಒಂದು ಕೋಡಗ, ಒಬ್ಬ ಸೂಳೆ, ಕೆಲವು ದಾರಿಹೋಕರು, ನಾಯಿಗಳು ಮಾತ್ರ ಊರಿನಲ್ಲಿ ಉಳಿದಿವೆ.

ಆದರೂ ಇವರೆಲ್ಲ (ಅರಸನ?) ಆನೆಯ ಸಾವು, ಸೂಳೆಗೆ ಆಸರೆ ಇಲ್ಲದಿರುವುದು, ಊರಲ್ಲಿ ಜನ ಇಲ್ಲದಿರುವುದು ಇದಾವುದನ್ನೂ ಗಮನಿಸದೆ ತಮ್ಮ ತಮ್ಮ ಕಸುಬು ನಡೆಸುತಿದ್ದಾರೆ. ಜಗತ್ತಿನ ವ್ಯವಹಾರ ಎಂದಿಗೂ ಹೀಗೆಯೇ ಇರುವಂತೆ ತೋರುತ್ತದೆ: ಅಸಹಜ ಸನ್ನಿವೇಶದಲ್ಲೂ ನಾವೆಲ್ಲರೂ ಸಾಮಾನ್ಯ ವರ್ತನೆಯನ್ನು ಹತಾಶರಾಗಿ ಮುಂದುವರೆಸುತ್ತಲೇ ಇರುತ್ತೇವೆ. ಇವೆಲ್ಲವನ್ನೂ ದಾರಿಹೋಕನೊಬ್ಬ ಹೊರಗಿನಿಂದ ಕಂಡು ಗುಹೇಶ್ವರನಿಗೆ ಹೇಳುತ್ತಾ ಕೊನೆಯ ವ್ಯಂಗ್ಯಭರಿತ ಪ್ರಶ್ನೆಯನ್ನು ಗುಹೇಶ್ವರನನ್ನೇ ಉದ್ದೇಶಿಸಿ ಕೇಳಿದಂತಿದೆ' ಎಂದು ರಾಮಾನುಜನ್ ಈ ವಚನವನ್ನು ವಿವರಿಸುತ್ತಾರೆ. ಅಂದರೆ ಬೆಡಗಿನ ವಚನದ ಒಂದೊಂದು ವಿವರವನ್ನೂ ಅದರ ಅಕ್ಷರಾರ್ಥದಲ್ಲೇ ಸ್ವೀಕರಿಸಿ ನಮ್ಮ ಮನಸಿನಲ್ಲಿ ಆ ಚಿತ್ರಗಳನ್ನು ರೂಪಿಸಿಕೊಳ್ಳುವ ದಾರಿಯಲ್ಲಿ ಸಾಗುವುದು ಅನುಭಾವದ ಇಂಥ ನುಡಿಗಳನ್ನು ಅರಿಯುವ ದಾರಿ. ಇಂಥ ಸ್ವ-ಅರ್ಥವಿನಿಮಯವೇ ಒಂದು ಅನುಭಾವ. ವಚನಕಾರರು 'ಅನುಭಾವ' ಅನ್ನುವ ಮಾತನ್ನು ಸಮಾನಮನಸ್ಕರ, ಸಮಾನ ಅನುಭವ ಪಡೆದವರ ನಡುವೆ ನಡೆಯುವ ಸಂವಾದ ಎಂಬ ಅರ್ಥದಲ್ಲೂ ಬಳಸುತ್ತಾರೆ. ಅನುಭಾವದ ನುಡಿಗಳೊಡನೆ ವ್ಯವಹರಿಸುವ ವಿಧಾನವೆಂದರೆ ಅಂಥ ನುಡಿಗಳಲ್ಲಿ ಆಸಕ್ತರಾದವರು ತಾವು 'ಮಾಡಿ'ಕೊಂಡ ಅರ್ಥಗಳನ್ನು ಪರಸ್ಪರ ಹಂಚಿಕೊಳ್ಳುವುದೇ ಆಗಿರುತ್ತದೆ.

ಇಂಥ ಓದು ಹುಡುಕುವುದು ಉತ್ತರವನ್ನಲ್ಲ, ಬದಲಾಗಿ ಇಲ್ಲಿನ ಒಂದೊಂದೂ ಅಂಶಗಳು ಒಟ್ಟುಗೂಡುತ್ತ ಕೊನೆಯ ಆಶ್ಚರ್ಯಭರಿತ ಪ್ರಶ್ನೆ ಅಥವ ಪ್ರಶ್ನಾರ್ಥಕ ಆಶ್ಚರ್ಯಕ್ಕೆ ಕಾರಣವಾಗುತ್ತವೆ ಅನ್ನುವುದನ್ನು ನಮ್ಮ ಅನುಭವದ ಮೂಲಕವೇ ವಿವರಿಸಿಕೊಳ್ಳುವ ತೊಡಗುವಿಕೆಯನ್ನು.

[ಮುಂದುವರೆಯುವುದು]



ಭವಿಪಾಕವ ಮುಟ್ಟದೆ ಸಮಸ್ತ ಮತದಿಂದ
ಅಯೋಗ್ಯವಾದ ಪದಾರ್ಥವನುಳಿದು
ಯೋಗ್ಯವಾದ ಪದಾರ್ಥವಕೊಂಡು,
ಪಾದೋದಕದಲ್ಲಿ ಪವಿತ್ರತೆಯಿಂದ ಸ್ವಪಾಕವ ಮಾಡಿ,
ಪರಶಿವಲಿಂಗವೆಂದರಿದು ಸುಖಿಸಿ ನಿಜೈಕ್ಯರಾದರು.
ಇದನರಿಯದ ಆಡಂಬರದ ವೇಷವ ಧರಿಸಿ
ಉದಕ ಹೊಯ್ದು ಸ್ವಯ ಚರ ಪರ ಷಟ್ಸ್ಥಲವ ಬೊಗಳುವ
ಕುನ್ನಿಗಳ ಕಂಡು ನಾಚಿತ್ತು ಕಾಣಾ,
ಎನ್ನ ಮನವು ಆಚಾರವೆ ಪ್ರಾಣವಾದ
ರಾಮೇಶ್ವರಲಿಂಗವೆ.

– ಅಕ್ಕಮ್ಮ





# ಜಂಗಮ ನೊಂದಡೆ ಆನು ಬೆಂದೆನಯ್ಯಾ . . .

**ವೆಂಕಟೇಶ ಕೆ. ಜನಾದ್ರಿ**

ಧರ್ಮಸಂಬಂಧ, ಜಾತಿಸಂಬಂಧ, ವರ್ಣಸಂಬಂಧ, ಕುಟುಂಬ ಸಂಬಂಧಕ್ಕಿಂತ ಮಿಗಿಲಾದದ್ದು ಜೀವಸಂಬಂಧ. ಸಕಲ ಜೀವಿಗಳ ಮಧ್ಯದಲ್ಲಿ ಅವ್ಯಕ್ತವಾದ ಅನುಕಂಪದ ಅಲೆಯಿದೆ. ಭಾವಗಳ ಬೆಸುಗೆ ಇದೆ. ಸಕಲ ಜೀವಿಗಳೊಂದಿಗೆ ಜೀವಿಸುವಲ್ಲಿ 'ನಾವೆಲ್ಲ ಒಂದೇ' ಎಂಬ ಜೀವನಪ್ರೀತಿ ಇದೆ. ಇದಕ್ಕೆ ಕಾರಣ ಸಕಲ ಜೀವಿಗಳಲ್ಲಿಯ ಆ ಚೇತನಶಕ್ತಿ ಒಂದೇ ಒಂದು ದೇವನ ಸ್ವರೂಪದ್ದೆನ್ನುತ್ತಾರೆ, ಅರಿತವರು. ಸಕಲ ಜೀವಿಗಳಲ್ಲಿರುವ ಚೇತನಶಕ್ತಿಯ ಒಟ್ಟಂಶವೇ ಪರಮಚೇತನ. ಈ ಪರಮಚೇತನಕ್ಕೆ ಶಿವ, ಭಗವಂತ, ದೇವ... ಹೀಗೆ ಅವರವರ ಭಾವಕ್ಕೆ ಸಂಬಂಧಿಸಿದಂತೆ ಅನುಭಾವಿಸಿಕೊಳ್ಳುತ್ತಾರೆ. ಆದರೆ ಈ ಪರಶಿವ, ಪರಮಚೇತನ, ಜೀವಾತ್ಮ ಅಥವಾ ಜೀವಿಗಳಲ್ಲಿರುವ ಆತ್ಮ ಎಂಬುದನ್ನು ಹುಡುಕಲು ಹೋದರೆ ಕಾಣಸಿಗದು. ಅದು ನನ್ನೊಳಗೂ ಇರುತ್ತದೆ; ಅಷ್ಟೇ ಅಲ್ಲ ಸಕಲ ಜೀವಿಗಳಲ್ಲಿರುವುದೆಂಬ ಭಾವ ಅನುಭಾವಗೊಳ್ಳುತ್ತಿರುತ್ತದೆಯಷ್ಟೇ. ಕಾಣದ ಈ ಆತ್ಮ, ಈ ಚೇತನವನ್ನು ಅರಿತುಕೊಂಡಾಗಲೇ ಮತ್ತು ಇದೇ ಚೇತನವೇ ಎಲ್ಲ ಜೀವಿಗಳಲ್ಲಿರುವುದೆಂಬ ಏಕತೆಯ ಅರಿವನ್ನು ಹೊಂದಿದವನೇ ಜ್ಞಾನಿ. ಶರಣ. ಭಕ್ತ. ಮಹಾತ್ಮ. ಸಾಧಕನಾಗಿರುತ್ತಾನೆ. ಪ್ರತಿ ಜೀವಿಯಲ್ಲಿರುವ ಈ ಭಾವಕೋಶದಲ್ಲಿ ಇಂಥ ಅರಿವಿನ ಶಕ್ತಿ ಅರಳಿಕೊಂಡಾಗಲೇ ಆತ ಅಂಗಭಾವವಳಿದ ಲಿಂಗವಂತನಾಗುತ್ತಾನೆ. ಲಿಂಗಸ್ವರೂಪಿ, ದೇವ ಸ್ವರೂಪಿಯಾಗುತ್ತಾನೆ.

ಇಂಥಹ ಲಿಂಗಾಂಗಸ್ವರೂಪಿಯಾದವನ ನಡೆ, ನುಡಿ, ಬದುಕಿನ ಪರಿ, ಭಾವ ಮತ್ತು ಅನುಭಾವಗಳು ಸದಾ ತನ್ನೊಳಗಿರುವಾತನನ್ನು ಸಾಕ್ಷೀಕರಿಸುತ್ತಲೇ ತನ್ನೊರಗೆ ಸಕಲ ಜೀವಿಗಳಲ್ಲಿರುವಾತನನ್ನು ಮೆಚ್ಚಿಸುವಂಥಹ ಭಾವ ಮತ್ತು ನಡೆಯನ್ನು ತನ್ನದನ್ನಾಗಿಸಿಕೊಳ್ಳುವ ಪ್ರಯತ್ನದಲ್ಲಿರುತ್ತಾನೆ. ಇದು ಕೇವಲ ಆತನ 'ಪ್ರಯತ್ನ'ವಲ್ಲ. ಇದುವೇ ಆತನ ನಿಜವಾದ ದೇವಪೂಜೆ. ವ್ಯಾವಹಾರಿಕ ಪ್ರಪಂಚದಲ್ಲಿ ಹಲವು ಬಗೆಯ ವ್ಯಕ್ತಿತ್ವದವರನ್ನು ನೋಡುತ್ತೇವೆ. ಒಬ್ಬಾತ ಕೇವಲ ತನ್ನ ಹಸಿವಿನ ಕುರಿತು, ತನ್ನ ಬದುಕಿನ ತಲ್ಲಣಗಳ ಕುರಿತು, ತನ್ನ ಕುಟುಂಬದ ನೋವು-ನಲಿವುಗಳ ಕುರಿತಷ್ಟೇ ಸದಾ ಯೋಚಿಸುತ್ತಿದ್ದರೆ, ಅದಕ್ಕಾಗಿ ಪ್ರಯತ್ನಿಸುತ್ತಿದ್ದರೆ ಆತ ಕೇವಲ ಸ್ವಾರ್ಥಿಯಾಗಿರುತ್ತಾನೆ. ಮತ್ತೊಬ್ಬರ ಹಸಿವಿನ ಕುರಿತು, ಅವರ ಬದುಕಿನ ತಲ್ಲಣಗಳ ಕುರಿತು, ಅವರ ನೋವಿನ ಕುರಿತಾಗಿಯೂ ಯೋಚಿಸುತ್ತಿದ್ದರೆ

ಕನಕಗಿರಿ ಸಹಾಯಕ ಲೆಕ್ಕಾಧಿಕಾರಿ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ, ಕೇಂದ್ರ ಕಛೇರಿ, ಸಾರಿಗೆ ಸದನ, ಸ್ವಾಮಿ ರಮಾನಂದತೀರ್ಥ ಮಾರ್ಗ, ಕಲಬುರ್ಗಿ-೫೮೫ ೧೦೨. ೯೯೪೫೩೩ ೯೦೪೯೨

ಆತ ಸಹಜ ಮಾನವೀಯತೆಯುಳ್ಳವನಾಗಿರುತ್ತಾನೆ. ಆದರೆ ಮತ್ತೊಬ್ಬರ ಹಸಿವೇ ತನ್ನ ಹಸಿವು, ಮತ್ತೊಬ್ಬರ ನೋವೇ ತನ್ನ ನೋವು, ಮತ್ತೊಬ್ಬರ ಸಮಸ್ಯೆಯೇ ತನ್ನ ಸಮಸ್ಯೆ ಎಂದು ಸ್ಪಂದಿಸಿ ಅವರಿಗಾಗಿ ತನ್ನೊಳಗೆ ಯಾವ ವ್ಯಕ್ತಿ ಬೆಂದುಕೊಳ್ಳುತ್ತಾನೆಯೋ ಅವನು ಶರಣನಾಗಿರುತ್ತಾನೆ. ಅವನು ಮಹಾತ್ಮನೆನಿಸಿಕೊಳ್ಳುತ್ತಾನೆ. ಆ ಬಗೆಯ ಚಿಂತನೆ ಪ್ರತಿಯೊಬ್ಬ ಲಿಂಗವಂತನ್ನದ್ದಾಗಿರಬೇಕೆಂಬ ಭಾವ ಬಸವಣ್ಣನದ್ದಾಗಿತ್ತು. ಬಸವಣ್ಣ ತಾನು ಬೆಂದೆನೆಂದು ಹೇಳುವುದು ಯಾತಕ್ಕೆ ಎಂಬ ಕುರಿತು ಅವರ ಈ ವಚನ ಮನದಟ್ಟುಗೊಳಿಸುತ್ತದೆ.

ನಡೆಯಲರಿಯದೆ, ನುಡಿಯಲರಿಯದೆ,
ಲಿಂಗವ ಪೂಜಿಸಿ ಫಲವೇನು! ಫಲವೇನು!
ಅವರ ದುಃಖವೆನ್ನ ದುಃಖ, ಅವರ ಸುಖವೆನ್ನ ಸುಖ
ಕೂಡಲಸಂಗನ ಶರಣರ ಮನ ನೊಂದಡೆ
ಆನು ಬೆಂದೆನಯ್ಯಾ

ನನ್ನೊಳಗೇ ಆ ದೇವಸ್ವರೂಪವಾದ ಚೇತನಶಕ್ತಿ ಇದೆ ಎಂದರಿತುಕೊಂಡಾದ ಮೇಲೆ ನನ್ನ ನುಡಿ, ನಡೆ, ಬದುಕು ಎಲ್ಲವೂ ಆ ನನ್ನೊಳಗಿರುವಾತನನ್ನು ಮೆಚ್ಚಿಸುವ ಬಗೆಯಲ್ಲಿರಬೇಕು. ಆತ ನನ್ನೊಳಗಿದ್ದಾನೆಂದು ಅರಿತುಕೊಂಡ ಮೇಲೂ ನನ್ನ ನಡೆಯುವ ಪರಿಯನ್ನು, ನನ್ನೊಳಗಿರುವಾತ ಗಮನಿಸುತ್ತಿರುತ್ತಾನೆಂಬ ಅರಿವಿದ್ದರೂ ನನ್ನ ನಡೆ ನನ್ನ ನುಡಿಗೆ ಬದ್ಧವಾಗಿಲ್ಲದಿದ್ದರೆ ನನ್ನೊಳಗಿರುವಾತನನ್ನೇ ದೇವನೆಂದು ನಾನು ಬರಿದೆ ಪೂಜಿಸಿದರೆ ಏನುಪಯೋಗ? ನನ್ನ ನುಡಿಯೊಂದು ಪರಿ, ನನ್ನ ನಡೆಯೊಂದು ಪರಿಯಾದಾಗ ನನ್ನ ಪಥ ಶರಣಪಥವಾಗಲು ಹೇಗೆ ಸಾಧ್ಯ? ನಾನು ನುಡಿಯುವಾಗ ನನ್ನೊಳಗಿರುವಾತ ನನ್ನ ನುಡಿಯನ್ನು ಗಮನಿಸುತ್ತಿರುತ್ತಾನೆಂದ ಮೇಲೆ ನಾನು ನುಡಿದಂತೆ ನನ್ನ ನಡೆ ಇಲ್ಲದಿರುವದನ್ನು ಆತ ಹೇಗೆ ತಾನೇ ಒಪ್ಪಲು ಸಾಧ್ಯ?

ನಾನು ಏನಾದರೊಂದು ವಿಷಯವನ್ನು ಅತಿ ರಂಜನೀಯವಾಗಿ ಅಭಿವ್ಯಕ್ತಿಸಿ ನನ್ನೆದುರಿಗೆ ನೆರೆದವರನ್ನು ಮೆಚ್ಚಿಸಬಹುದು. ಉದಾಹರಣೆಗೆ ವಾಸ್ತವದಲ್ಲಿ ನಾನೊಬ್ಬ ಅಪ್ಪಟ ಲೋಭಿ, ಸ್ವಾರ್ಥಿಯಾಗಿದ್ದರೂ ಸಹ ನಾನೊಬ್ಬ ದಾನಶೀಲ, ನಾನೊಬ್ಬ ಶರಣ, ನಾನೊಬ್ಬ ದಾಸೋಹಿ... ಎಂದೆಲ್ಲ ನನ್ನಲ್ಲಿಲ್ಲದಿರುವುದನ್ನು ಇದೆ ಎಂದು ನನ್ನ ನುಡಿಗಳಿಂದ ಇತರರನ್ನು ಮೆಚ್ಚಿಸಬಹುದು. ನೆರೆದವರನ್ನು ಸುಲಭವಾಗಿ ನಂಬಿಸಿಬಿಡಬಹುದು. ಆದರೆ ಆ ನನ್ನ ನುಡಿಗೆ ಸದಾ ನನ್ನೊಳಗೇ ಇದ್ದು ಪ್ರತಿ ಕ್ಷಣ ನನ್ನ ನಡೆಯನ್ನು ಗಮನಿಸುತ್ತಿರುವಾತ ನನ್ನ ಈ ಹುಸಿನುಡಿಗಳನ್ನು ಒಪ್ಪಬೇಕಲ್ಲ? ಏಕೆಂದರೆ ನನ್ನ ಪ್ರತಿಯೊಂದು ನಡೆಗೆ, ಪ್ರತಿಯೊಂದು ನುಡಿಗೆ ಆತನೇ ಮೊದಲ ಸಾಕ್ಷಿಯಾಗಿರುತ್ತಾನೆ. ಆತ ಹೌದೆನ್ನುವಂತೆ ನನ್ನ ನಡೆ ಇಲ್ಲದಿದ್ದರೆ ನಾನು ನಡೆಯಲರಿಯದ ಅಪ್ರಯೋಜಕ. ಆತ ಅಹುದಹುದೆನ್ನುವಂತೆ ನನ್ನ ನುಡಿ ಇಲ್ಲದಿದ್ದರೆ ನಾನು ನುಡಿಯಲರಿಯದ ಅಪ್ರಯೋಜಕನಲ್ಲವೆ? ಹೀಗೆ ಆತನನ್ನು ಮೆಚ್ಚಿಸುವ ಬಗೆಯಲ್ಲಿ





ನಾನು ನಡೆಯಲರಿಯದೆ, ನಾನು ನುಡಿಯಲರಿಯದೇ ಆ ದೇವನ ಕುರಿತು ಕೇವಲ ಮಾತುಗಳಿಂದ ಕೇವಲ ತೋರಿಕೆಯ ಪೂಜೆಯನ್ನು ಮಾಡಿದರೆ, ತೋರಿಕೆಗಾಗಿ ಕೈಯಲ್ಲಿ ಹಿಡಿದ ಇಷ್ಟಲಿಂಗವನ್ನು ಪೂಜಿಸುತ್ತಿದ್ದರೆ ಆ ಲಿಂಗದ ಪೂಜೆಯಿಂದ ಏನುಪಯೋಗ? ಅದಕ್ಕಾಗಿ ಬಸವಣ್ಣ ಈ ಬಗೆಯ ಪೂಜೆಯ ಕುರಿತಾಗಿ "ಲಿಂಗವ ಪೂಜಿಸಿ ಫಲವೇನು! ಫಲವೇನು! ಎಂದು ಬಹಳ ನೊಂದುಕೊಂಡು ಛೇಡಿಸುತ್ತಾರೆ. ಬಸವಣ್ಣ ಹೀಗೆ ಛೇಡಿಸುವುದು ನಮ್ಮ ಮೇಲಿನ ಕೋಪದಿಂದಲ್ಲ. ನಮ್ಮಂಥವರಲ್ಲಿ ಶರಣ ಭಾವವ ಅರಳಲಿ ಎಂಬ ಕಳಕಳಿಯಿಂದ.

ಸಾಧಕನೊಬ್ಬ ಬಹಿರಂಗದಲ್ಲಿ ತಾನು ಇಷ್ಟಲಿಂಗವನ್ನು ಧರಿಸಿಕೊಂಡು ಆ ಇಷ್ಟಲಿಂಗಯ್ಯನನ್ನು ಪೂಜಿಸುವ ಮೂಲಕ ತನ್ನೊಳಗೊಬ್ಬ ನಿರಾಕಾರಲಿಂಗಯ್ಯ ಇದ್ದಾನೆಂಬ ಭಾವದಲ್ಲಿ ತನ್ನ ಇಡೀ ಕಾಯವನ್ನು ಲಿಂಗಮಯವಾಗಿಸಿಕೊಳ್ಳಬೇಕು. ಆಗ ತಾನೇ ಸ್ವಯಂ ಲಿಂಗಸ್ವರೂಪಿಯಾಗುತ್ತಾನೆ. ಇಂಥ ಲಿಂಗಸ್ವರೂಪಿಯ ನುಡಿಗಳೆಲ್ಲವೂ ನಡೆಗಳಾಗಿರಬೇಕು. ಇಂಥ ಲಿಂಗಸ್ವರೂಪಿಯು ಬಸವಣ್ಣ ಕೊಟ್ಟ ಕಾಯಕ ಸೂತ್ರವನ್ನು ಪಾಲಿಸಬೇಕು. ಕಾಯಕ–ದಾಸೋಹ–ಪ್ರಸಾದ ಎಂಬ ತ್ರಿವಿಧ ಪೂಜೆಯೇ ಈ ಲಿಂಗವಂತನ ನಿಜವಾದ ಲಿಂಗಪೂಜೆಯಾಗಿರುತ್ತದೆ. ಈ ಬಗೆಯ ಪೂಜಿಸುವಿಕೆಯಿಂದಲೇ ಆತ ತನ್ನ ಅಂತರಂಗವನ್ನು ಶುದ್ಧಿಗೊಳಿಸುವುದರೊಂದಿಗೆ ಬಹಿರಂಗದಲ್ಲಿಯೂ ಸಕಲ ಜೀವಿಗಳೊಂದಿಗೆ ವ್ಯವಹರಿಸುವಾಗಲೂ ಅವರಲ್ಲಿಯೂ ಆ ದೇವನಿರುವನೆಂಬ ಭಾವದಲ್ಲಿ ಅವರುಗಳೆಲ್ಲರೂ ಲಿಂಗಸ್ವರೂಪಿಗಳೆಂಬ ಭಾವದಲ್ಲಿ ಅವರೊಂದಿಗೆ ವರ್ತಿಸುವುದೇ ಜಂಗಮವ್ಯವಹಾರ ಮತ್ತು ಜಂಗಮಲಿಂಗದ ಪೂಜೆಯಾಗುತ್ತದೆ. ಅವರೊಂದಿಗೆ ಸಹ ಆತ ತನ್ನ ಕಾಯಕ, ದಾಸೋಹ ಮತ್ತು ಪ್ರಸಾದದ ಸೂತ್ರವನ್ನು ಅಳವಡಿಸಿಕೊಂಡಿರಬೇಕಾಗುತ್ತದೆ. ಹೀಗಾದಾಗಲೇ ಆತನಿಗೆ ತಾನು ಬೇರೆಯಲ್ಲ, ಇನ್ನೊಂದು ಜೀವವೂ ಬೇರೆಯಲ್ಲ, ಎಲ್ಲರೂ ಆ ದೇವನ ವಂಶಜರೇ ಎಂಬ ಭಾವದ ನೆಲೆ ಸ್ಫುರಿಸುತ್ತದೆ. ಆಗ ಅಲ್ಲಿ "ಇವನಾರವ" ಎಂಬ ಪರಭಾವವಳಿದು, "ಇವ ನಮ್ಮವ" ಎಂಬ ಸ್ವಭಾವ ಸ್ಫುರಿಸಲು ಆರಂಭವಾಗುತ್ತದೆ. ಪ್ರತಿಯೊಬ್ಬರಲ್ಲಿಯೂ "ಇವ ನಮ್ಮವ" ಎಂಬ ಸ್ವಭಾವ ಸ್ಫುರಿಸಿದಾಗಲೇ ಈ ಅಂತರಂಗದ ಸೆಲೆಗೆ "ಪಾದೋದಕ" ಎಂದು ಕರೆಯುವುದು ಸೂಕ್ತವೆಂದು ನನಗನ್ನಿಸುತ್ತದೆ.

ಹೀಗೆ ಸಕಲರಲ್ಲಿಯೂ ದೇವಭಾವದ ಇರುವಿಕೆಯ ಬಗೆಗಿನ ಪ್ರೀತಿ, ಕಾರುಣ್ಯ ಅಳವಟ್ಟಾಗಲೇ ಅವರೆಲ್ಲರ ದುಃಖ ಎನ್ನ ದುಃಖ, ಅವರೆಲ್ಲರ ಸುಖವೇ ಎನ್ನ ಸುಖ ಎಂಬ ತತ್ವಸಂಬಂಧ ಅರಳುವುದು. ಈ ಸಂಬಂಧ ಎಲ್ಲ ಸಂಬಂಧಗಳ ಸಾಂಪ್ರದಾಯಿಕ ಎಲ್ಲೆಗಳನ್ನು ಮೀರಿದ್ದು. ಅದಕ್ಕಾಗಿಯೇ ಬಸವಣ್ಣ ಎಲ್ಲ ಸಂಬಂಧಗಳಾಚೆಗಿರುವ ಈ ಸಂಬಂಧದ ಕುರಿತಾಗಿ ಮಾತನಾಡಿದರು. ಈ ಎಲ್ಲರೂ ಕೂಡಿರುವ ವ್ಯವಸ್ಥೆಯೇ ಕಲ್ಯಾಣವ್ಯವಸ್ಥೆ ಎಂದು ಅವರು ಭಾವಿಸಿದ್ದರು. ಈ ಸಕಲರ ಕೂಡುವಿಕೆಯೇ ಬಸವಣ್ಣನವರ

ಕೂಡಲಸಂಗಮವಾಗಿತ್ತು. ಇಲ್ಲಿ ಭಾವ ಅನುಭಾವಗಳು ಕೂಡಿದ್ದವು. ನಾನು ನನ್ನೊಂದಿಗೆ ಇತರರೂ ಕೂಡಿದ ಕುಟುಂಬದ ಕೂಡಲಸಂಗಮವಾಗಿತ್ತು. ಜೀವ ಮತ್ತು ಪರಮಾತ್ಮ ಕೂಡಿದ ಇಹಪರದ ಸಂಗಮವಾಗಿತ್ತು. ವ್ಯಕ್ತಿ ಅಂದರೆ ಲಿಂಗ, ಸಕಲ ಜೀವಿಗಳು ಅಂದರೆ ಜಂಗಮ ಕೂಡಿದ ಕೂಡಲಸಂಗಮವೂ ಆಗಿತ್ತು.

ಅದಕ್ಕಾಗಿ ಬಸವಣ್ಣ ಸಕಲರ ಸುಖ, ಸಕಲರ ದುಃಖಗಳೆಲ್ಲವೂ ನನ್ನದಾಗಿರ ಬೇಕೆನ್ನುತ್ತಾರೆ. ಸಕಲರನ್ನೂ ಕೂಡಲಸಂಗನ ಶರಣರೆನ್ನುತ್ತಾರೆ. ಇಂತಹ ಶರಣರ ಮನ ನೊಂದಡೆ "ಆನು ಬೆಂದೆನಯ್ಯಾ" ಎಂಬ ಭಾವವನ್ನು ಅವರು ಕೇವಲ ಅಭಿವ್ಯಕ್ತಿಸುವುದಿಲ್ಲ. ಅದು ಅವರ ಅಂತರಂಗದಲ್ಲಿ ಬೆಂದ ಭಾವೋದ್ರೇಕವಾಗಿರುತ್ತದೆ. ಅವರ ಅಂತಃಕರಣದಲ್ಲಿ ಸ್ಫುರಿಸಿದ ಭಾವರಸ. ಅದವರ ಭಕ್ತಿಯ ಪಾದೋದಕವಾಗಿತ್ತು. ಬಸವಣ್ಣ ಬೇಯುವುದು ಕೇವಲ ತನಗಾಗಿ ಅಲ್ಲ ಅವರು ಬೇಯುವುದು ಜಂಗಮಕ್ಕಾಗಿ. ಕೂಡಲ ಸಂಗನ ಶರಣರ ನೊಂದ ಮನಕ್ಕಾಗಿ, ಅಂದರೆ ಸಕಲ ಜೀವಿಗಳ ನೋವೂ ಅವರ ನೋವಾಗಿತ್ತು. ಸಕಲ ಜೀವಿಗಳ ಹಸಿವೇ ಅವರ ಹಸಿವಾಗಿತ್ತು. ಈ ಭಾವದಲ್ಲಿ ಬಸವಣ್ಣನ ಚಿಂತನೆಗಳು ವಿಭಿನ್ನವಾಗಿದ್ದವು. ಸಕಲ ಜೀವಿಗಳಲ್ಲಿ ದೇವನಿದ್ದ ಕಾರಣ ಅವರನ್ನೆಲ್ಲ ಶರಣರೆನ್ನುವ ಉದಾತ್ತ ಚಿಂತನೆಗಳು ಬಸವಣ್ಣನಲ್ಲಿದ್ದವು. ಶರಣಜೀವಿಗಳು ನೊಂದು ಬೆಂದರೆ ಆ ನೋವಿಗೆ, ಬೇಯುವಿಕೆಯನ್ನು ಅವರು ತಾವೇ ಬೇಯುತ್ತಾರೆ. "ಆನು ಬೆಂದೆನಯ್ಯಾ" ಎಂಬ ಕಳಕಳಿಯ ಜೀವಪರ ನಿಲುವು ಬಸವಣ್ಣನಿಗಲ್ಲದೆ ಮತ್ತಾರಿಗೆ ಬರಲು ಸಾಧ್ಯ?

ಈ "ಬಸವಭಾವ" ಎಲ್ಲರ ಭಾವವಾದಲ್ಲಿ ಇಂದಿನ ವಿಶ್ವದಲ್ಲಿ ತಾಂಡವವಾಡುತ್ತಿರುವ ದ್ವೇಷ-ಅಸೂಯೆ, ರಾಗ-ದ್ವೇಷ, ಯುದ್ಧ-ಉನ್ಮಾದ, ಹಿಂಸೆ-ಅನ್ಯಾಯ ಮತ್ತು ಅಮಾನುಷ ಅತ್ಯಾಚಾರಗಳೆಲ್ಲವೂ ಅಂಗಸ್ವರೂಪದ ಭಾವದಲ್ಲಿ ಐಕ್ಯವಾಗಿ, ವ್ಯಷ್ಟಿಲಿಂಗದಲ್ಲಿ ಮತ್ತು ಸಮಷ್ಟಿಯ ಜಂಗಮಲಿಂಗದಲ್ಲಿ ಬಸವ ಭಾವವರಳಿ ವಿಶ್ವವೇ ಬಸವಮಯವಾಗಿ, ಕಲ್ಯಾಣಪ್ರಪಂಚವಾಗಿ ರೂಪುಗೊಳ್ಳುವ ಸಾಧ್ಯತೆಯನ್ನು ಬಸವಾನುಯಾಯಿಗಳು ಉಳಿಸಿಕೊಳ್ಳಬೇಕಿದೆ. ಈ ಬಸವ ಭಾವ ಅವರಲ್ಲಿ ನೆಲೆಯಾದರೆ ಸಕಲರಲ್ಲಿಯೂ ಬಸವಭಾವ ವನ್ನರಳಿಸಲು ಅನುವಾಗುವಂತೆ ತಮ್ಮೊಳಗೇ ಇಂಬಿಟ್ಟುಕೊಂಡಿರುವ ಇಷ್ಟಲಿಂಗಯ್ಯನನ್ನು ಪೂಜಿಸಿಕೊಳ್ಳಲು ಆರಂಭಿಸಬೇಕಿದೆ. ಬಸವಭಾವವನ್ನೇ ಬಿತ್ತಿ ಬಸವಸಂಸ್ಕೃತಿಯನ್ನು ಬೆಳೆದುಕೊಳ್ಳಲು ಯತ್ನಿಸುತ್ತಿರುವ ಸಕಲ ಲಿಂಗಸ್ವರೂಪಿಗಳಿಗೆ ಶರಣು ಶರಣಾರ್ಥಿ. □

ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ.
ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು
ನಿಶ್ಚೈಸಿ ಮಾಡಬೇಕು ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ, ಬೇಗ
ಹೋಗು ಮಾರಯ್ಯಾ.

– ಆಯ್ದಕ್ಕಿ ಲಕ್ಕಮ್ಮ





## ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

ವಚನಗಳು ಕೇವಲ ನುಡಿಗಡಣವಲ್ಲ ಅವು ಅನುಭಾವದ ಮಾತುಗಳು ಮಾತ್ರವಲ್ಲ ಶರಣರು ತಮಗೆ, ಸಮಾಜಕ್ಕೆ ಮತ್ತು ಅಂಗದ ಮೇಲಿನ ಲಿಂಗಕ್ಕೆ ಕೊಟ್ಟುಕೊಂಡ ಪ್ರಮಾಣಗಳು. ಇವುಗಳಲ್ಲಿ ಅವರ ಬದುಕಿನ, ಬದುಕಿನ ಧ್ಯೇಯದ ಮತ್ತು ವೈಚಾರಿಕತೆಯ ವಿಷಯಗಳು ಅಡಗಿವೆ. ೧೨ ನೆಯ ಶತಮಾನದ ಅನುಭವ ಮಂಟಪ, ಶರಣರು ತಮ್ಮ ಅನುಭವವನ್ನು, ಅನುಭಾವವನ್ನು ಹಂಚಿಕೊಂಡ ಒಂದು ಅದ್ಭುತವಾದ ಸ್ಥಳವಾಗಿತ್ತು.ಅದೊಂದು ವಿಚಾರ ಮಂಥನಗಳ ಕೇಂದ್ರವಾಗಿತ್ತು. ಅಲ್ಲಿ ನಡೆದ ಚರ್ಚೆಗಳಿಂದ ಹೊರಬಂದ ನವನೀತವೇ ವಚನಗಳಾಗಿ, ಶರಣಧರ್ಮದ ತಿರುಳಾಗಿ ಹೊರಹೊಮ್ಮಿದವು. ಹಾಗಾದರೆ ಈ ಅನುಭಾವವೆಂದರೇನು? ಅದು ಅನುಭವಕ್ಕಿಂತ ಹೇಗೆ ಭಿನ್ನ ಎನ್ನುವುದನ್ನು ಚರ್ಚಿಸುವುದು ಈ ಲೇಖನದ ಉದ್ದೇಶ.

ಈ ಅನುಭಾವ ಮತ್ತು ಅನುಭವಗಳ ನಡುವಿನ ವ್ಯತ್ಯಾಸವನ್ನು ಅರಿಯುವುದು ಅತ್ಯವಶ್ಯಕ. ವಿಜ್ಞಾನ ಒಂದು ವಸ್ತುವನ್ನು ಅದರ ಭೌತಿಕ ಮತ್ತು ರಾಸಾಯನಿಕ ಗುಣಗಳಿಂದ ಗುರುತಿಸಿ ಅದರ ಬಣ್ಣ,ಆಕಾರ, ತೂಕ, ರುಚಿ,.......ಇತರ ಗುಣಗಳನ್ನು ವರ್ಣಿಸಿ, ಅದನ್ನು ವರ್ಣಿಸುತ್ತದೆ. ಹೀಗೆ ಮಾಡುವಾಗ ತಾನು ಕಂಡುಕೊಂಡ ಗುಣಗಳನ್ನು ಅನುಭವದಿಂದ ದಾಖಲಿಸಿ, ಅದನ್ನು ಮತ್ತೊಮ್ಮೆ ಕಂಡಾಗ ಈ ಅನುಭವ ಅವರಿಗೆ ಅದನ್ನು ಗುರುತಿಸಲು ನೆರವಾಗುತ್ತದೆ. ಇದೊಂದು ಇಂದ್ರಿಯಾನುಭವ. ಇದಕ್ಕೂ ಅನುಭಾವಕ್ಕೂ ಬಹಳ ವ್ಯತ್ಯಾಸವಿದೆ.

ಶರಣರು ಅನುಭಾವವನ್ನು ವರ್ಣಿಸುವುದು ಸಾಧ್ಯವಾಯಿತೆ? ಅನುಭವ ಇಂದ್ರಿಯಾತೀತವೇ? ಎನ್ನುವುದನ್ನು ತಿಳಿಯಬೇಕೆಂದರೆ ಮತ್ತೆ ಶರಣರ ವಚನಗಳತ್ತ ಮುಖ ಮಾಡುವುದು ಅನಿವಾರ್ಯ. ವಿಶೇಷವಾಗಿ ಅಲ್ಲಮ ಪ್ರಭುಗಳು ಮತ್ತು ಮುಕ್ತಾಯಕ್ಕನ ನಡುವೆ ನಡೆದ ಸಂಭಾಷಣೆಯನ್ನು ಗಮನಿಸಬೇಕಾಗುತ್ತದೆ.

"ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು
ಶಿಶುಕಂಡ ಕನಸಿನಂತಿರಬೇಕಲ್ಲದೆ,
ನುಡಿದು ಹೇಳುವನ್ನಕ್ಕರ ಬಿನ್ನವಲ್ಲದೇನು ಹೇಳಾ ?
ಅರಿವರತು ಮರಹು ನಷ್ಟವಾಗಿ ಗುರುವ ತೋರಿದೆನೆಂಬರು.

ನಂ. 302/25, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್,
1ನೇ ಹಂತ, ಬೆಂಗಳೂರು – 560 086 94810 35983

ಇದಿರಿಂಗೆ ಕರುಳಕಲೆಯನರುಹುವ ಪರಿಯೆಂತು ಹೇಳಾ ?
ಮನದ ಕೊನೆಯ ಮೊನೆಯ ಮೇಲಣ ಅರಿವಿನ ಕಣ್ಣಮುಂದೆ
ಸ್ವಯಂಪ್ರಕಾಶ ತೋರುತ್ತಿದ್ದಡೆ ತಾನಾಗಬಲ್ಲನೆ ?
ನೆರೆಯರಿತು ಮರೆಯಬಲ್ಲಡೆ
ಎನ್ನ ಅಜಗಣ್ಣನಂತೆ ಶಬ್ದಮುಗ್ಧನಾಗಿರಬೇಕಲ್ಲದೆ,
ಶಬ್ದಸಂದಣಿಯ ಮಾತು ಸಯವಲ್ಲ ನೋಡಯ್ಯಾ.

"ಅರಿವನ್ನು ಅರಿತಿರುವೆನೆನ್ನುವುದೇ ಮರವೆ. ಮರಹನ್ನು ಮರೆತೆನೆನ್ನುವುದೂ ಮರವೆ. ಅಂದರೆ ತಿಳಿದಿರುವೆ ಎಂದು ಕೊಳ್ಳುವುದೇ ಒಂದು ಅಜ್ಞಾನ. ಜ್ಞಾನ ಎನ್ನುವುದು ಒಂದು ವಸ್ತುವಲ್ಲ ಅದು ಕಾಣುತ್ತದೆ: ಕಾಣುವುದಿಲ್ಲ ಎನ್ನುವುದು ಮಿಥ್ಯ. ಬ್ರಹ್ಮತತ್ವವನ್ನು ಅರಿದವರು ನನ್ನಣ್ಣನಂತೆ ಶಬ್ದಮುಗ್ಧವಾಗಿರಬೇಕಿತ್ತು. ಅತ್ಮಾನುಭೂತಿ ಎನ್ನುವುದು ಅನುಭವಕ್ಕೆ ಮಾತ್ರ ವೇದ್ಯ, ಅದನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. ಎರಡನಳಿದೆ ಎನ್ನುವವರು ಕಂದನಿಗೆ ಬಿದ್ದ ಕನಸಿನಂತಿರಬೇಕು ತಾವು ಬಹಳ ಮಾತನಾಡುತ್ತೀರಿ ಪ್ರಭುವೇ" ಎಂದು ಮುಕ್ತಾಯಕ್ಕ ಹೇಳುತ್ತಾಳೆ.ಆದರೆ ಅಲ್ಲಮರು ಅದೇ ಮೃದು ಮಾತಿನಲ್ಲಿ ಉತ್ತರಿಸುತ್ತಾರೆ.

ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ವ,
ತಾಳೋಷ್ಠ ಸಂಪುಟವೆಂಬುದೇ ನಾದ ಬಿಂದು ಕಳಾತೀತ.
ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ.

ತಾಯೀ ಶರಣರಾಡುವ ಮಾತು ಕೇವಲ ತುಟಿಗಳ ಸಂಪುಟದಿಂದ ಹೊರಬಿದ್ದ ಶಬ್ದಗಳ ಸಮುದಾಯವಲ್ಲ. ಅದು ಪ್ರಕಾಶಿಸುವ ಜ್ಯೋತಿರ್ಲಿಂಗ, ಅವರ ಉಸಿರೇ ಪರಬ್ರಹ್ಮ ತತ್ವ, ಅದು ಅತೀತವಾದ ಪರವಸ್ತುವಿನ ಸ್ಥಿತಿ ಬಿಂಬ. ಶರಣರು ಎಂದೂ ನುಡಿದು ಸೂತಕಿಗಳಲ್ಲ. ನಿರಾಕಾರವಾದ ಪರವಸ್ತುವನ್ನು ಹೇಗೆ ಸಗುಣ ರೂಪವಾದ ಲಿಂಗದಲ್ಲಿ ಸಾಕಾರ ಗೊಳಿಸಲು ಸಾಧ್ಯವೋ ಹಾಗೆಯೇ ಆಧ್ಯಾತ್ಮಪರವಾದ ವಿಶೇಷ ಅನುಭೂತಿಯನ್ನು ಮಾತಿನಲ್ಲಿ ಹೇಳಬಹುದು. ಅಂತಹ ಮಾತು ಜ್ಯೋತಿರ್ಲಿಂಗವಾಗುತ್ತದೆ." ಪ್ರಭುಗಳ ಈ ಮಾತುಗಳಿಂದ ಮುಕ್ತಾಯಕ್ಕನಿಗೆ ತೃಪ್ತಿಯಾಗಲಿಲ್ಲ ಆಕೆ ಮತ್ತೆ,

ನಡೆದು ನಡೆದು ನಡೆಯ ಕಂಡವರು, ನುಡಿದು ನುಡಿದು ಹೇಳುತ್ತಿಹರೆ?
ನುಡಿದು ನುಡಿದು ಹೇಳುವನ್ನಕ್ಕರ, ನಡೆದುದೆಲ್ಲಾ ಹುಸಿಯೆಂಬೆನು,
ಮಾತಿನ ಮಂಥನದಿಂದರಿವು, ಕರಣಮಥನದಿಂದಾವಲ್ಲದೆ,
ಅನುಪಮ ಸ್ವರ ಭೇದವಾದ ಪರಿ ಎಂತು ಹೇಳಾ?
ಇದಿರ ಗೆಲಬೇಕೆಂದು ನುಡಿಕೊಂಡರೇನು?
ಮನಕ್ಕೆ ಮನವೆ ಸಾಕ್ಷಿಯಾಗಿ ನಿಃಪತಿಯಲ್ಲ ನೋಡಾ!
ಎನ್ನ ಅಜಗಣ್ಣ ತಂದೆ ಶಬುದಕ್ಕೆ ಹೇಸಿ ಮುಗುದನಾದನು.





ಕೇವಲ ಮಾತಿನಲ್ಲಿ ಎದುರಿಗಿರುವವರನ್ನು ಗೆಲ್ಲಬೇಕೆಂಬ ಹಠವಿದ್ದರಾಯಿತೇ?
ಸಹಜ ಜ್ಞಾನ ಅಳವಟ್ಟಿಲ್ಲ ಇಂಥಹರ ಮಾತಿಗೆ ಹೇಸಿ ನನ್ನಣ್ಣ ಮೌನಿಯಾದ" ಎಂದಾಗ ಪ್ರಭುಗಳು

ತನ್ನತಾನರಿದಡೆ ನುಡಿಯೆಲ್ಲಾ ತತ್ವ ನೋಡಾ!
ತನ್ನ ತಾ ಮರೆದಡೆ ನುಡಿಯೆಲ್ಲಾ ಮಾಯೆ ನೋಡಾ!
ಅರಿದು ಮರೆದ ಶಿವಯೋಗಿಯ ಶಬುದವೆಲ್ಲಾ
ಉಪದೇಶವಲ್ಲದೇ ಭಿನ್ನ ಉಂಟೇ?
ನಿನ್ನ ಮನದ ಕಳವಳವ ತಿಳುಹಳೆಂದು ಮಾತನಾಡಿಸಿ ನೋಡಿದಡೆ,
ಎನ್ನ ಮನದೊಳಗೆ ಕಂದು ಕಲೆಯೆಂಬುದಿಲ್ಲ ನೋಡಾ.
ನಮ್ಮ ಗುಹೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ
ಬಾಯ್ದೆಗೆದೆನಲ್ಲದೆ ಭಿನ್ನ ಉಂಟಾ ಹೇಳಾ ಮರುಳೆ?" ಎಂದರು.
ಆದರೆ ಮುಕ್ತಾಯಕ್ಕನಿಗೆ ಮಾತಿನ ಬಗೆಗಿನ ನಿಲುವು ಬದಲಾಗಲಿಲ್ಲ.
ನುಡಿಯ ಹಂಗಿನ್ನು ನಿಮಗೆ ಹಿಂಗದು ನಡೆಯನೆಂತು ಪರರಿಗೆ ಹೇಳುವಿರಿ?
ಒಡಲ ಹಂಗಿನ ಸುಳುಹು ಬಿಡದು ಎನ್ನೊಡನೆ ಮತ್ತೇತರನುಭವವಣ್ಣಾ?
ತಾನಾದುದಲ್ಲದೆ ಇದಿರಿಂಗೆ ಹೇಳಬಹುದೇ? ಅರಿವ ತೋರಬಲ್ಲರೆ,
ತನ್ನನರುಹದೆ ಅರಿವನು ಕಾಣಾ ಎನ್ನ ಅಜಗಣ್ಣ ತಂದೆ
ಮಾತನಾಡುವ ಹಂಬಲವೇ ನಿಮಗಿನ್ನು ಹೋಗಿಲ್ಲ ಅಂದಾಗ ಇನ್ನೊಬ್ಬರಿಗೆ ಹೇಗೆ ಹೇಳುವಿರಿ?" ಎಂದು ಕೆಣಕುತ್ತಾಳೆ.

ಅಲ್ಲಮಪ್ರಭುಗಳು ಒಬ್ಬ ಪರಿಪೂರ್ಣ ಯೋಗಿಯಾಗಿದ್ದರಿಂದ, ಇಂಥಹ ಮಾತುಗಳನ್ನು ಕೇಳಿಯೂ, ಸಮಾಧಾನದಿಂದ ಉತ್ತರಿಸುತ್ತಾರೆ.

ಹಾಗಾದರೆ, ಅನುಭಾವ ಎನ್ನುವುದು ವರ್ಣನಾತೀತವೇ? ಅನಿರ್ವಚನೀಯವೇ? ಅದು ನಿಜವೇ ಆದಲ್ಲಿ ಶರಣರು ತಮ್ಮ ಅನುಭಾವವನ್ನು ವರ್ಣಿಸುವಲ್ಲಿ ಯಶಸ್ವಿಯಾದರೆ? ಈ ಅನುಭಾವದ ಬಗೆಗೆ ವಿಜ್ಞಾನ ಏನು ಹೇಳುತ್ತದೆ? ಎನ್ನುವುದನ್ನು ನೋಡುವ ಪ್ರಯತ್ನ ಮಾಡೋಣ.

ವಿಜ್ಞಾನ ಅನುಭವ ಮತ್ತು ಅನುಭಾವವನ್ನು ಬೇರೆ ಬೇರೆಯಾಗಿ ನೋಡುವುದಿಲ್ಲ. ಅದು ಅದೆಲ್ಲವನ್ನೂ ಒಂದೇ ಎಂಬಂತೆ ನೋಡುತ್ತದೆ. ಆದರೆ ಅ ವಿಭಿನ್ನ ಅನುಭವವನ್ನು ಇಂದ್ರಿಯಾತೀತವಾದದ್ದು ಎಂದು ಮಾತ್ರ ಹೇಳುತ್ತದೆ. ಈ ಅನುಭಾವ ವರ್ಣನಾತೀತವಾಗಿದ್ದರೆ, ಅನಿರ್ವಚನೀಯವಾಗಿದ್ದರೆ, ಅದನ್ನು. ಸಮರ್ಥವಾಗಿ ವರ್ಣಿಸಲಸಾಧ್ಯ, ಎಂದರ್ಥವೇ? ಅಥವಾ ಅನುಭಾವದ ವಿಷಯವು ಅನುಭಾವಿಗಳಲ್ಲದವರಿಗೆ ಅರ್ಥವಾಗುವುದಿಲ್ಲ ಎಂಬುದು ಅದರ ಅರ್ಥವೇ? ಮುಂತಾದ ಪ್ರಶ್ನೆಗಳು ಉಳಿದುಕೊಳ್ಳುತ್ತವೆ. ಅನಿರ್ವಚನೀಯತೆ

ಅನುಭಾವದ ಒಂದು ಅವಿಭಾಜ್ಯ ಲಕ್ಷಣ ಎಂಬುದಂತೂ ನಿಜ. ಆದರೆ ಅನುಭಾವದ ಯಾವ ಅಂಶ ಅನಿರ್ವಚನೀಯ ಎಂಬುದನ್ನು ಹುಡುಕಿದರೆ ಈ ಗೊಂದಲ ಪರಿಹಾರವಾಗುತ್ತದೆ. ಇದಕ್ಕೆ ನಮಗೆ ಎರಡು ಉತ್ತರಗಳು ಸಿಗುತ್ತವೆ.

ಅನುಭಾವ ಅಥವಾ ತುರಿಯಾವಸ್ಥೆಯಲ್ಲಿ ಇರುವವರೆಗೆ ಬಹಳಷ್ಟು ಅನುಭಾವಿಗಳಿಗೆ ಅತೀವ ಆನಂದ ಉಂಟಾಗುತ್ತದೆ. ಅದನ್ನು ಅನುಭಾವಿಗಳು ಬ್ರಹ್ಮಾನಂದ, ನಿತ್ಯಾನಂದ, ಸದಾನಂದ, ನಿಜಸುಖ ಮುಂತಾಗಿ ವರ್ಣಿಸುತ್ತಾರೆ. ಆಗ ಭೌತವಸ್ತುಗಳೊಡನೆಯೂ ಇಂದ್ರಿಯ ಮನಸ್ಸಿನೊಡನೆಯೂ, ಇರುವ ಸಂಬಂಧವನ್ನು ತಾತ್ಕಾಲಿಕವಾಗಿ ಕಡಿದುಕೊಂಡು ಕೇವಲ ತಾನೊಂದೇ ಇರುವುದರಿಂದ ಅದು ನಿಜದ ಆನಂದ ಎನಿಸಿಕೊಳ್ಳುತ್ತದೆ; ಆತ್ಮವು ಆನಂದವನ್ನು ಇಂದ್ರಿಯ ಮತ್ತು ವಿಷಯಗಳ ಸಂಬಂಧದ ಮೂಲಕ ಪಡೆಯುವುದಿಲ್ಲ, ಅದರ ಮೂಲಸ್ವರೂಪವೇ ಆನಂದ. ಸಾಂಸಾರಿಕ ಉಪಾಧಿಗಳಿಂದಾಗಿ ಆ ಆನಂದ ಪ್ರಕಟವಾಗುವುದಿಲ್ಲ; ಆಧ್ಯಾತ್ಮಿಕ ಸಾಧನೆಯಿಂದಾಗಿ ಆ ದೋಷಗಳನ್ನು ನಿವಾರಿಸಿ, ಅನುಭಾವವನ್ನು ಪಡೆದವರಲ್ಲಿ ಅದು ಪ್ರಕಟವಾಗುತ್ತದೆ. ಅದು ಆತ್ಮಾನಂದ.ಈ ಆನಂದವು ಅತ್ಯಂತ ಉತ್ಕಟವಾದ ಆನಂದ. ವಿಷಯಸುಖವು ಇಂದ್ರಿಯ ಮತ್ತು ವಿಷಯಗಳ ಸಂಪರ್ಕ ಇರುವವರೆಗೆ ಮಾತ್ರ. ಆದರೆ ಆನುಭಾವಿಕ ಆನಂದವು ಪ್ರಕಾರ ನಿತ್ಯ. ಅಲ್ಲಮಪ್ರಭು ಹೇಳುವಂತೆ "ತಾಗು ತಡೆಯಿಲ್ಲದ ಸುಖ". ಇದು ಇಂದ್ರಿಯ ಮತ್ತು ವಿಷಯಗಳ ಸಂಪರ್ಕದಿಂದ ಬರುವ ಯಾವುದೇ ರೀತಿಯ ಸುಖಕ್ಕಿಂತ ಭಿನ್ನ. ಆದುದರಿಂದ ಅದು ಅನಿರ್ವಚನೀಯ. ಇಂದ್ರಿಯ ಸುಖವನ್ನು ಕೆಲವು ಸಂದರ್ಭಗಳಲ್ಲಾದರೂ ವರ್ಣಿಸಬಹುದು. ಆದರೆ ಆತ್ಮಾನಂದ ಅವರ್ಣನೀಯ. ಅಲ್ಲಮ ಹೇಳುವಂತೆ, "ಮನದ ಸುಖವ ಕಂಗಳಿಗೆ ತಂದರೆ, ಕಂಗಳ ಸುಖವ ಮನಕೆ ತಂದರೆ ನಾಚಿತ್ತು ಮನ, ನಾಚಿತ್ತು ಮನ?"

ಅನುಭಾವಿಯ ಲಕ್ಷಣವನ್ನು ಚೆನ್ನಬಸವಣ್ಣ ವರ್ಣಿಸುತ್ತಾನೆ.

ಅನುಭಾವದಿಂದಾಗಿ ಶರಣನ ದೇಹೇಂದ್ರಿಯಾದಿಗಳನ್ನು ಲಿಂಗ ಆಕ್ರಮಿಸಿಕೊಂಡಾಗ, ಅವನು ತನ್ನತನ ಕಳೆದುಕೊಂಡು ಲಿಂಗದ ಶರೀರವಾಗುತ್ತಾನೆ. ಇಲ್ಲಿಯೂ ನಮಗೆ ಮೊದಲಿನ ಪ್ರಶ್ನೆ ಕಾಡುತ್ತದೆ. ನಾನು ಇಲ್ಲದೆ ಹೋದರೆ ನಾನು ಇಲ್ಲ ಎಂದು ಹೇಳಲು ಹೇಗೆ ಸಾಧ್ಯ? ಹಾಗೆ ಹೇಳಲಾದರೂ ನಾನು ಇರಲೇಬೇಕಲ್ಲವೇ? ಮೇಲಿನ ವಿರೋಧಾಭಾಸಗಳಂತೆ ಇದನ್ನೂ ಸ್ವೀಕರಿಸಬೇಕು. ಏಕೆಂದರೆ ಅದು ವಾಸ್ತವ. ಅನುಭಾವಿ ತನ್ನತನವನ್ನು ಕಳೆದುಕೊಂಡು ಲಿಂಗದ ಶರೀರವಾಗಿದ್ದಾನೆ ಎಂಬುದೂ ಸತ್ಯ, ಮನನಷ್ಟವಾಗಿರುವುದೂ ಸತ್ಯ.

ಇವೆಲ್ಲವನ್ನೂ ನೋಡಿದಾಗ ಈ ಅನುಭಾವ ವಿಶಾಲವಾದ ಅರ್ಥವನ್ನು ಹೊಂದಿದ್ದು, ಅನುಭಾವಿಗೆ ಮಾತ್ರ ನಿಲುಕುತ್ತದೆ. ಅದನ್ನು ವರ್ಣಿಸುವಲ್ಲಿ ವಚನಕಾರರ ಪ್ರಯತ್ನ ಶ್ಲಾಘನೀಯ. ಹಾಗೆಂದೂ ಅದು ಸಮಾಜದ ಎಲ್ಲ ಸ್ಥರಗಳ ಜನರನ್ನು ತಲುಪುವಲ್ಲಿ ಯಶಸ್ವಿಯಾಯಿತು.







# ಸಂತ ಎಂದರೆ ಯಾರು? ಸಂತ ಶಬ್ದದ ನಿರುಕ್ತಿ, ಸಂತರ ಲಕ್ಷಣ

**ಮ.ಸು. ಕೃಷ್ಣಮೂರ್ತಿ**

**ಸಂ**ತ ಶಬ್ದ ಸಾಮಾನ್ಯವಾಗಿ ಬುದ್ಧಿವಂತ[೧], ಪವಿತ್ರಾತ್ಮ[೨], ಸಜ್ಜನ[೩], ಪರೋಪಕಾರಿ[೪] ಮತ್ತು ಸದಾಚಾರಿ[೫] ಎಂಬ ಅರ್ಥಗಳಲ್ಲಿ ಬಳಕೆಗೊಂಡಿರುವುದು ಕಂಡು ಬರುತ್ತದೆ. ಸಾಧಾರಣ ಭಾಷೆಯಲ್ಲಿ ಭಕ್ತ, ಸಾಧು, ಮಹಾತ್ಮ ಮೊದಲಾದ ಶಬ್ದಗಳ ಪರ್ಯಾಯವಾಗಿ ಈ ಶಬ್ದ ಬಳಕೆಗೊಳ್ಳುತ್ತದೆ. ಆದರೆ ಕೆಲವರ ಪ್ರಕಾರ 'ಸಂತ' ಶಬ್ದ 'ಶಾಂತ' ಶಬ್ದದ ರೂಪಾಂತರ. ಈ ದೃಷ್ಟಿಯಲ್ಲಿ ಸಂತ ಎಂದರೆ 'ಶಂ ಸುಖಂ ಬ್ರಹ್ಮಾನಂದಾತ್ಮಕಂ ವಿದ್ಯತೇ ಅಸ್ಯ' ಎಂದರೆ ಬ್ರಹ್ಮಾನಂದ ಸಂಪನ್ನ ವ್ಯಕ್ತಿ ಎಂದು ಅರ್ಥೈಸಲಾಗುತ್ತದೆ. ಪಾಳಿ ಭಾಷೆಯಲ್ಲಿ ಬರೆದ ಬೌದ್ಧರ 'ಧಮ್ಮಪದ'ದಲ್ಲಿ ಈ ಶಬ್ದ 'ಶಾಂತ' ಎಂಬ ಅರ್ಥದಲ್ಲಿ ಅನೇಕ ಕಡೆ ಬಳಕೆಯಾಗಿದೆ[೬]. ಮತ್ತೆ ಕೆಲವು ವಿದ್ವಾಂಸರು ಸಂತ ಶಬ್ದಕ್ಕೆ 'ಸನೋತಿ ಪ್ರಾರ್ಥಿತಂ ಫಲಂ ಪ್ರಯಚ್ಛತಿ' ಎಂದು ವ್ಯುತ್ಪತ್ತಿ ನೀಡಿ ಅದು 'ಸಂತಿ' ಅಥವಾ 'ಸತ್ಯ'

ಶಬ್ದದ ವಿಕೃತರೂಪವೆಂದು ಹೇಳುತ್ತಾರೆ. ಅವರ ಪ್ರಕಾರ ಸಂತ ಶಬ್ದದ ಅರ್ಥ 'ಫಲದಾತರಲ್ಲಿ ಶ್ರೇಷ್ಠ' ಎಂದು. ಬೇರೊಂದು ಮತದ ಪ್ರಕಾರ ಸಂತ ಶಬ್ದ, ಸನತಿ ಸಂಭವತಿ 'ಲೋಕಾನನುಗೃಹ್ಣಾತಿ' ಎಂದು ವ್ಯುತ್ಪತ್ತಿ ನೀಡಿ ಅದರ ಅರ್ಥ ಲೋಕಾನುಗ್ರಹಕಾರಿ' ಎಂದಿದೆ. ಈ ಎಲ್ಲ ಊಹೆಗಳು ಸಂತ ಶಬ್ದದಿಂದ ಸೂಚಿತವಾದ ವ್ಯಕ್ತಿಗಳ ಪ್ರಶಂಸಾದ್ಯೋತಕವೆನ್ನಿಸುತ್ತದೆ. ಸಂತ ಶಬ್ದ ಸಂವಾದಿಯಾದ 'ಸೇಂಟ್' ಶಬ್ದದ ಅರ್ಥ ಕೂಡ ಇದಕ್ಕೆ ಹತ್ತಿರವಾಗಿದೆ. 'Saint' ಶಬ್ದ ವಸ್ತುತಃ ಲ್ಯಾಟಿನ್ "ಸ್ವಾಂತಿ' (ಪವಿತ್ರಗೊಳಿಸು) ವಿನ ಆಧಾರದ ಮೇಲೆ ನಿರ್ಮಿತವಾದ 'Sanctus' ಶಬ್ದದಿಂದ ಜನಿಸಿದೆ. ಅದರ ಅರ್ಥ 'ಪವಿತ್ರ' ಎಂದು. ಕ್ರೈಸ್ತಧರ್ಮದ ಅನೇಕ ಪ್ರಾಚೀನ ಮಹಾತ್ಮರ ಬಗೆಗೆ 'ಪವಿತ್ರಾತ್ಮ' ಎಂಬ ಅರ್ಥದಲ್ಲಿ ಈ ಶಬ್ದವನ್ನು ಬಳಸಲಾಗಿದೆ.

ಸಂತ ಶಬ್ದ ಕನ್ನಡದಲ್ಲಿ ಏಕವಚನದಲ್ಲಿ ಬಳಕೆಗೊಳ್ಳುತ್ತದೆ. ಆದರೆ ಅದು ಮೂಲತಃ ಸಂಸ್ಕೃತದ 'ಸನ್' ಶಬ್ದದ ಬಹುವಚನ ರೂಪ. (ಅಸ್ : ಆಗು) ಧಾತುವಿನಿಂದಾದ 'ಸತ್' ಶಬ್ದದ ಪುಲ್ಲಿಂಗ ರೂಪ, ಶತೃ ಪ್ರತ್ಯಯ ಹಚ್ಚಿ ಆದ ಶಬ್ದ ಅದರ ಅರ್ಥ 'ಆಗುವ', 'ಇರುವ' ಎಂದು. ಈ ರೀತಿ ಸಂತ ಶಬ್ದದ ಮೂಲ ಅರ್ಥ ಶುದ್ಧ ಅಸ್ತಿತ್ವ ಮಾತ್ರದ ಬೋಧಕ, ಸದಾ ಏಕರಸವಾಗಿ ಅವಿಕೃತವಾಗಿರುವ ಸತ್ಯವೆಂದು ಕರೆಯಲ್ಪಡುವ ಆ ನಿತ್ಯ

ವಸ್ತು ಇಲ್ಲವೆ ಪರಮಾತ್ಮನ ಅರ್ಥದಲ್ಲಿ ನಡೆಯುತ್ತದೆ. ಈ ಶಬ್ದ ಸತ್ ರೂಪದಲ್ಲಿ ಪರಮಾತ್ಮ ಎಂಬ ಅರ್ಥದಲ್ಲಿ ವೈದಿಕ ಸಾಹಿತ್ಯದಲ್ಲೇ ಬಳಕೆಗೊಂಡಿರುವುದು ಕಂಡು ಬರುತ್ತದೆ. ಉದಾಹರಣೆಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ಆರಂಭದಲ್ಲಿ ಒಂದು ಅದ್ವಿತೀಯ 'ಸತ್' ವಸ್ತುವಿತ್ತು ಎಂದು ಹೇಳಿದೆ (ಸದೇವ ಸೋಮ್ಯೇದಮಗ್ರ ಆಸೀದೇಕಮೇವಾ ದ್ವಿತೀಯಮ್-ದ್ವಿತೀಯ ಖಂಡ). ಋಗ್ವೇದದಲ್ಲಿ ಒಂದೆಡೆ ಹೀಗೆ ಹೇಳಿದೆ: 'ಸುಪರ್ಣ ವಿಪ್ರಾಃ ಕವಯೋವ ಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ' (ಋ.ವೇ. ೧೦-೪-೫) ಅರ್ಥಾತ್ ಕ್ರಾಂತದರ್ಶಿ ವಿಪ್ರರು ಆ ಏಕವೂ ಅದ್ವಿತೀಯವೂ ಆದ 'ಸತ್' ಅನ್ನೇ ಅನೇಕ ರೀತಿಯಲ್ಲಿ ವರ್ಣಿಸುತ್ತಾರೆ. ಸಂತ ಶಬ್ದ ಇದೇ ಅರ್ಥದಲ್ಲಿ ಅಪಭ್ರಂಶದ ಗ್ರಂಥ 'ಪಾಹುಡದೋಹಾ'ದಲ್ಲಿ ಬಂದಿದೆ.

ಕೆಲವು ಪ್ರಸಿದ್ಧ ಮಹಾಪುರುಷರು ಸಂತ ಹಾಗೂ ಭಗವಂತ ಇಬ್ಬರೂ ಅಭಿನ್ನರೆಂದಿದ್ದಾರೆ. ಹಿಂದಿಯ ಸುಪ್ರಸಿದ್ಧ ಭಕ್ತ ಕವಿಗಳಾದ ತುಲಸೀದಾಸರು ಹೀಗೆ ಹೇಳಿದ್ದಾರೆ: 'ಜಾನೇಸು ಸಂತ ಅನಂತ ಸಮಾನಾ' (ರಾಮಚರಿತ ಮಾನಸ – ಉತ್ತರಕಾಂಡ) ಅರ್ಥಾತ್ ಸಂತ ಅನಂತ ಪರಮಾತ್ಮನಿಗೆ ಸಮಾನವೆಂದು ತಿಳಿ, ಸಂತ ಮತ್ತು ರಾಮ ಇಬ್ಬರೂ ಒಂದೇ ಎಂದು ತಿಳಿಯಬೇಕು ಎಂದು ಹಿಂದಿಯ ಹಿರಿಯ ಸಂತ ಪಲ್ಟೂ ಹೇಳಿದ್ದಾನೆ. ಈ ಎಲ್ಲದರಿಂದ 'ಸಂತ' ಎಂದರೆ ಸತ್‌ರೂಪಿಯಾದ ಪರಮಾತ್ಮನ ಅನುಭವವನ್ನು ಪಡೆದವನು, ತನ್ನ ವ್ಯಕ್ತಿತ್ವದಿಂದ ಮೇಲೆದ್ದು ಆತನೊಂದಿಗೆ ತದ್ರೂಪನಾಗಿರುವವನು ಎಂಬ ತಾತ್ಪರ್ಯ ಹೊರಬರುತ್ತದೆ.

ಆದರೆ ಭಗವದ್ಗೀತೆಯಲ್ಲಿ 'ಸತ್' ಶಬ್ದಕ್ಕೆ ಬೇರೆ ಅರ್ಥಗಳನ್ನು ಹೇಳಿದೆ. ಅದರ ಪ್ರಕಾರ 'ಸತ್' ಶಬ್ದ 'ಓಂತತ್ ಸತ್' ಎಂಬ ಉಕ್ತಿಯಲ್ಲಿ ಪರಬ್ರಹ್ಮನನ್ನು ನಿರ್ದೇಶಿಸುತ್ತದೆ. "ಓಂ ತತ್ಸದಿತಿ ನಿರ್ದೇಶೋ ಬ್ರಹಣಸ್ತ್ರಿವಿಧಃ ಸ್ಮೃತಃ."

(ಗೀತೆ – ೧೭-೨೩) ಆದರೂ ಈ ಶಬ್ದವನ್ನು 'ಅಸ್ತಿತ್ವ' ಮತ್ತು 'ಸಾಧು' ಎಂಬ ಅರ್ಥದಲ್ಲಿ ಬಳಸಲಾಗುತ್ತದೆ. ಪ್ರಶಸ್ತಿ ಹಾಗೂ ಸತ್ಕರ್ಮಾರ್ಥದಲ್ಲೂ ಇದನ್ನು ಬಳಸಲಾಗುತ್ತದೆ:

ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ।
ಪ್ರಶಸ್ತೇ ಕರ್ಮಣಿ ತಥಾಸಚ್ಛಬ್ದಃ ಪಾರ್ಥ ಯುಜ್ಯತೇ ॥
ಯಜ್ಞೇ ತಪಸಿದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ, ।
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥

ಯಜ್ಞ, ತಪಸ್ಸು ಹಾಗೂ ದಾನದಲ್ಲಿ ಸ್ಥಿತಿ ಅರ್ಥಾತ್ ಸ್ಥಿರಭಾವನೆಯನ್ನಿಡುವುದನ್ನೂ 'ಸತ್' ಎಂದೇ ಕರೆಯುತ್ತಾರೆ. ಇವುಗಳ ನಿಮಿತ್ತವಾಗಿ ಮಾಡಬೇಕಾದ ಕರ್ಮವೂ 'ಸತ್' ಎನ್ನಿಸಿಕೊಳ್ಳುತ್ತದೆ.

ಇದರಿಂದ ಸತ್‌ಪದವಾಚೀ ಸಂತನಾಗಬೇಕಾದರೆ ಬರಿಯ ಬ್ರಹ್ಮನಿಷ್ಠನಾದರೆ ಸಾಲದು, ಅದರ ಜೊತೆಗೆ ಸಾಧುಭಾವ ಎಂದರೆ ಸರ್ವಭೂತಹಿತಭಾವನೆ, ಪ್ರಶಸ್ತಕರ್ಮ ಇಲ್ಲವೆ





ಸತ್ಕಾರ್ಯ ಮಾಡುವ ಕ್ಷಮತೆ, ಯಜ್ಞ, ತಪಸ್ಸು ಹಾಗೂ ದಾನವೇ ಮೊದಲಾದ ಕರ್ಮಗಳಲ್ಲಿ ಪ್ರವೃತ್ತಿ ಮತ್ತು ತದರ್ಥ ಎಂದರೆ ಈಶ್ವರಾರ್ಥ ನಿಷ್ಕಾಮ ಕರ್ಮದ ಅಭ್ಯಾಸವೆಂದು ಹೇಳಬಹುದು.

ಸಂತ ಕಬೀರ ಸಂತರ ಲಕ್ಷಣವನ್ನು ಹೀಗೆ ಹೇಳಿದ್ದಾನೆ:

ನಿರ್ವೈರೀ, ನಿಹಕಾಮನಾ ಸಾಈ ಸೇತೀ ನೇಹ್ ।
ವಿಷಯಾಂ ಸೂಂ ನ್ಯಾರಾ ರಹೈ ಸಂತನ ಕೋ ಅಂಗ ಏಹ್ ।

– ಕಬೀರ ಗ್ರಂಥಾವಲೀ, ಪು. ೬೧

ಎಂದರೆ ನಿರ್ವೈರಿ, ನಿಷ್ಕಾಮಿ ಪ್ರಭುವಿನೊಡನೆ ನೇಹ, ವಿಷಯಗಳಿಂದ ದೂರ, ಇವೇ ಸಂತನ ಲಕ್ಷಣಗಳು, ಬೌದ್ಧಧರ್ಮದಲ್ಲಿ ಬೋಧಿಸತ್ವನ ಆದರ್ಶಗಳನ್ನು ಹೇಳುತ್ತ (ಸಂತನ ಲಕ್ಷಣಗಳನ್ನು) ಹೀಗೆ ಹೇಳಿದೆ, 'ಉಪೇಕ್ಖಾ' (ಉಪೇಕ್ಷೆ), ಪಞಾ (ಪ್ರಜ್ಞೆ), ಮೇತ್ತು (ಮೈತ್ರಿ) ಮತ್ತು ನೇಕ್ಖಮ್ಮ (ನಿಷ್ಕಾಮ)![೭] ಈ ಎಲ್ಲ ಪರಿಭಾಷೆಗಳ ಆಧಾರದ ಮೇಲೆ ಸ್ಥೂಲವಾಗಿ ಸಂತನ ಲಕ್ಷಣವನ್ನು ಹೀಗೆ ಹೇಳಬಹುದು: 'ವಿಷಯ ನಿರಪೇಕ್ಷತೆ, ಸತ್ಕರ್ಮ ಪರಾಯಣತೆ, ಸತ್ ರೂಪೀ ಪರಮಾತ್ಮನಲ್ಲಿ ಏಕಾಂತ ನಿಷ್ಠೆ, ಪ್ರಾಣಿಮಾತ್ರದ ಬಗೆಗೆ ಮೈತ್ರೀಭಾವ, ಯಾರ ಬಗೆಗೂ ದ್ವೇಷವಿಲ್ಲದಿರುವಿಕೆ, ನಿಸ್ಸಂಗನಾಗಿ ನಿಷ್ಕಾಮ ಕರ್ಮ ಮಾಡುವಿಕೆ, ಆಚಾರ ವಿಚಾರಗಳಲ್ಲಿ ಅವಿನಾಭಾವ. ಆದರೆ ಸಾಧನಾಭೇದಗಳಿಂದಾಗಿ ವಿಭಿನ್ನ ಪಂಥಗಳವರು ಜ್ಞಾನ, ಭಕ್ತಿ ಇಲ್ಲವೆ ಆಚರಣೆಯ ಪ್ರಾಧಾನ್ಯದಿಂದಾಗಿ ಸಂತ ಶಬ್ದಕ್ಕೆ ವಿಭಿನ್ನ ಪರಿಭಾಷೆಗಳನ್ನು ನೀಡಿದ್ದಾರೆ. ಉದಾಹರಣೆಗೆ ವೈಚಾರಿಕತೆಗೆ ಪ್ರಾಧಾನ್ಯ ನೀಡುವವರು ಆದರ್ಶ ಸಂತನಲ್ಲಿ ಸದಸದ್ವಿವೇಕದಲ್ಲಿ ದಕ್ಷತೆಯಿರಬೇಕೆಂದು ಹೇಳಿದರೆ ಭಕ್ತಿಪ್ರಧಾನ ಪಂಥಗಳು ಪರಮ ರಹಸ್ಯದ ಪರಿಪೂರ್ಣ ಪರಿಚಯವುಳ್ಳ ಪರತತ್ವದೊಂದಿಗೆ ತದ್ರೂಪತೆಯಿರಬೇಕೆಂದು ಹೇಳುತ್ತವೆ. ಆಚರಣೆಗೆ ಮಹತ್ವ ನೀಡುವವರು ಆತನ ಅಲೌಕಿಕ ಜೀವನಕ್ಕೆ ಮಹತ್ವ ಕೊಡುತ್ತಾರೆ. ಆಧ್ಯಾತ್ಮಿಕ ಆಧಾರದ ಮೇಲೆ ಅದರ ಪುನರ್ ನಿರ್ಮಾಣ, ಈ ಭೂತಳದಲ್ಲೇ ಮನುಷ್ಯ ಜೀವನ್ಮುಕ್ತನಾಗಿದ್ದು ಆನಂದದಿಂದ ಬದುಕುವಂತೆ ಮಾಡುವುದು ಹಾಗೂ ವಿಶ್ವ ಕಲ್ಯಾಣಕ್ಕೆ ನೆರವಾಗುವುದೆಂದು ಕಂಡುಬರುತ್ತದೆ.

ಇಷ್ಟಾದರೂ 'ಸಂತ' ಶಬ್ದಕ್ಕೆ ಭಾರತೀಯ ಭಾಷೆಗಳಲ್ಲೆಲ್ಲ ಒಂದೇ ಅರ್ಥ ಇದೆಯೆಂದು ಹೇಳುವಂತಿಲ್ಲ. ಡಾ. ರಾನಡೆಯವರ ಪ್ರಕಾರ ಮರಾಠಿಯಲ್ಲಿ ಸಂತನೆಂದರೆ ವಾರಕರೀ ಸಂಪ್ರದಾಯದ ಅನುಯಾಯಿ :– "Now 'Santa' is almost a technical word in the vithala sampradaya, and means any man who is a follower of that sampradaya. Not that the followers of other sampradayas are not 'Santas'; but the followers of the varkari sampradaya are Santas par excellence"[೮].

ಹಿಂದಿಯಲ್ಲಿ ನಿರ್ಗುಣೋಪಾಸಕರನ್ನು ಮಾತ್ರ ಸಂತರೆಂದು ಕರೆಯಲಾಗುತ್ತದೆ.

ಭಕ್ತನೆಂದರೆ ಸಗುಣೋಪಾಸಕ, ಸಂತನೆಂದರೆ ನಿರ್ಗುಣೋಪಾಸಕ ಎಂಬ ಕಲ್ಪನೆಯಿದೆ. ಪಂಜಾಬಿಯಲ್ಲಿ ರಾಜಕೀಯದ ವ್ಯಕ್ತಿಗಳಿಗೂ ಈ ಶಬ್ದ ಬಳಕೆಗೆ ಬರುತ್ತದೆ. ಆದರೆ ಸಂತ ಕಬೀರನ ಪರಿಭಾಷೆ ಕೊಂಚ ಹೆಚ್ಚು ಕಡಿಮೆ ಎಲ್ಲ ಭಾಷೆಗಳ ಸಂತರಿಗೂ ಅನ್ವಯಿಸುತ್ತದೆ. ಕಬೀರ, ರೈದಾಸ ಮೊದಲಾದ ಹಿಂದೀ ಸಂತರು ತಮ್ಮ ಸಿದ್ಧಾಂತಗಳಿಗೆ 'ಸಂತ ಮತ' ಎಂದು ಹೆಸರು ಕೊಟ್ಟಿದ್ದಾರೆ. ಸಂತನ ಸ್ಥಿತಿಯನ್ನು ಸಂತ ದೇಶದಲ್ಲಿ ನಿರಂತರ ನೆಲೆಸಿರುವವನೆಂಬ ಅರ್ಥದಲ್ಲಿ ಬಳಸಿದ್ದಾರೆ. ಬಹುಶಃ ಎಲ್ಲರೂ ತಾವು ಒಂದು ವಿಶೇಷ ಇಲ್ಲವೆ ವಿಲಕ್ಷಣ ಪರಂಪರೆಯ ವ್ಯಕ್ತಿಗಳು ಎಂದು ಹೇಳಿಕೊಂಡಿದ್ದಾರೆ.

ಸಂತ ಸಮನ್ವಯವಾದಿ ಎಂಬ ಮಾತನ್ನು ಕಬೀರ ಒಂದೆಡೆ ಹೇಳಿದ್ದಾನೆ :

ಸಾಧು ಐಸಾ ಚಾಹಿಯೇ ಜೈಸೇ ಸೂಪ ಸುಭಾಯ್ ।
ಸಾರ ಸಾರಕೋ ಗಹಿ ರಹೈ ಥೋಥಾ ದೇಇ ಉಡಾಯ್ ।

ಅರ್ಥಾತ್ ಸಾಧು ಒಂದು ಒಳ್ಳೆಯ ಮೊರದಂತಿರಬೇಕು. ಮೊರ ಜೊಳ್ಳನ್ನು ತೂರಿ ಕಾಳನ್ನು ಉಳಿಸಿಕೊಳ್ಳುವಂತೆ ಸಾಧು ಕೂಡ ಸಾರಗ್ರಾಹಿಯಾಗಿ ಅಸಾರವನ್ನು ತ್ಯಾಗ ಮಾಡಬೇಕು. ಅವನು ಸಂನ್ಯಾಸಿಯಾಗಬೇಕಿಲ್ಲ, ಸರ್ವಸಂಗ ಪರಿತ್ಯಾಗಿಯಾಗಬೇಕಿಲ್ಲ, ಗೃಹಸ್ಥನಾಗಿದ್ದು ಕೊಂಡೇ ಅವನು ಸಾಧನೆ ಮಾಡಬಹುದು.

'ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ' ಎಂಬ ಮಾತು ಸತನಿಗೂ ಅನ್ವಯಿಸುತ್ತದೆ. ಯಾವುದೂ ಸಹಜವಾಗಿರಬೇಕು, ಬಲಾತ್ಕಾರ ಸಲ್ಲ, ಹೊಲ್ಲ ಎಂದು ಕಬೀರ ಹೀಗೆ ಹೇಳಿದ್ದಾನೆ :

ಸಹಜ ಮಿಲೈ ಸೋ ದೂಧ ಸಮ, ಮಾಂಗಾ ಮಿಲೈ ಪಾನೀ ।
ಕಪತ ಕಬೀರ ವಹ ರಕ್ತಸಮ ಜಾಂಮೇ ಐಂಚಾತಾನೀ ।

ಸಹಜದಿ ದೊರೆತರದು ಹಾಲು, ಬೇಡಿ ಪಡೆದರೆ ಅದು ನೀರು, ಕಿತ್ತಾಡಿ ಪಡೆದರದು ರಕ್ತಸಮ.

ಉತ್ತರಭಾರತದ ಸಂತರು ಮುಕ್ತಕಗಳನ್ನು ಮಾತ್ರ ರಚಿಸಿದ್ದಾರೆ. ಅವುಗಳನ್ನು 'ಬಾನೀ' ಎಂದು ಕರೆಯುತ್ತಾರೆ. ಈ ಸಂತರು ವೇಷ ಭೂಷಣ ಹಾಗೂ ಲಾಂಛನಗಳ ಆಡಂಬರದಿಂದ ದೂರ. ಸಾಮಾಜಿಕ ಭೇದಭಾವವನ್ನು ತೊರೆಯುವಂತೆ ಉಪದೇಶ ನೀಡುತ್ತ ಎಲ್ಲರ ಬಗೆಗೆ ಪ್ರೇಮ ಹಾಗೂ ಉಪಕಾರ ಭಾವವುಳ್ಳವರು. ಇವರ ಸರಳವೂ ಸಾತ್ವಿಕವೂ ಆದ ಜೀವನದಲ್ಲಿ ಅಹಿಂಸೆ ಹಾಗೂ ಅಪರಿಗ್ರಹಕ್ಕೆ ವಿಶೇಷ ಮಹತ್ವವಿತ್ತು. ಸ್ತುತಿ, ನಿಂದೆ, ಮಾನಾಪಮಾನಗಳನ್ನು ಲಕ್ಷಿಸದೆ ತಮ್ಮ ಶುದ್ಧ ವ್ಯವಹಾರದಿಂದ ಎಲ್ಲರಿಗೂ ಶಾಂತಿ, ಸುಖಗಳನ್ನು ನೀಡಿ ಸ್ವತಃ ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿರುತ್ತಿದ್ದ ಇವರು ವರ್ಗಹೀನ ಸಮಾಜದ ಸ್ವಪ್ನ ದ್ರಷ್ಟಾರರು. ಈ ಭೂತಳವನ್ನೇ ಸ್ವಾನುಭೂತಿ ಹಾಗೂ ಸದಾಚಾರದಿಂದ ಸ್ವರ್ಗಧಾಮವನ್ನಾಗಿ ಮಾಡಲು ಹವಣಿಸಿದ ಕರ್ಮ ವೀರರು. ವಿಶ್ವದ ಪರಿಚಾಲಕ ಶಕ್ತಿ





ಒಂದೇ ಮತ್ತು ಪ್ರತಿಯೊಬ್ಬರೂ ತಾತ್ವಿಕವಾಗಿ ಅದರೊಂದಿಗೆ ಅಭಿನ್ನರು ಎಂಬ ಆಧ್ಯಾತ್ಮಿಕ ಸಾಮ್ಯವಾದದ ಬೀಜಮಂತ್ರಗಳನ್ನು ಬಿತ್ತಿದ ಮಹಾನುಭಾವರು.

'ಗೀತಗೋವಿಂದ'ದ ಕರ್ತೃವಾದ ಜಯದೇವ ಮತ್ತು ನಾಮದೇವ ಇವರನ್ನು ಕಬೀರ ಆದರ್ಶ ಸಂತರೆಂದು ಹೆಸರಿಸಿದ್ದಾನೆ. ಆದರೆ ಸಂತ ಕಬೀರನಿಂದಲೇ ಸಂತಮತ ಆರಂಭವಾಯಿತೆಂದು ಹೇಳಿ ಆತನನ್ನು ಆದಿ ಸಂತನೆಂದು ಔತ್ತರೇಯ ಸಂತರು ಕರೆದಿದ್ದಾರೆ. ಜಯದೇವನಿಂದ ಹಿಡಿದು ಮಹಾತ್ಮಾಗಾಂಧೀಜಿಯವರೆಗಿನ ಈ ಸಂತ ಪರಂಪರೆ ೧೨ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ಅವಿಚ್ಛಿನ್ನವಾಗಿ ನಡೆದು ಬಂದಿದೆ. ಅಷ್ಟೇ ಅಲ್ಲ, ಮಹಾತ್ಮಾಗಾಂಧೀಜಿಯವರಿಂದ ಈ ಸಂತ ಪರಂಪರೆಗೆ ಒಂದು ವಿಶೇಷ ಚಾಲನೆ ದೊರೆತಿದೆ.

ಆಕರ ಗ್ರಂಥ


೧. ಸಂತ : ಪರೀಕ್ಷಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯ ಬುದ್ಧಿ:
– ಕಾಳಿದಾಸ 'ತಂ ಸನ್ತಃ ಶೋತುಮರ್ಹಂತಿ ಸದಸಕ್ತಿ ಹೇತವಃ' – ಕಾಳಿದಾಸ.

೨. "ಪ್ರಾಯೇಣ ತೀರ್ಥಾಭಿಗಮಾಪದೇಶೈಃ ಸ್ವಯಂ ಹಿ ತೀರ್ಥಾನಿ ಪುವಂತಿ ಸಂತ" – ಭಾಗವತ ಸ್ಕಂ ೧–೧೯–೧೮.
"ಪರಗುಣ ಪರಮಾಣೂನ್ಪರ್ವತೀ ಕೃತ್ಯ ನಿತ್ಯಂ ಹೃದಿವಿಲಸನ್ತ: ಸಂತಿ ಸಂತಃಕಿಯಂತಃ" –ಭವಭೂತಿ

೩. 'ಬಂದೌ ಸಂತ ಅಸಜ್ಜನ ಚರಣಾ, ದುಃಖಪ್ರದ ಉಭಯ ಬೀಚ ಕಛು ಬರಣಾ ತುಲಸೀದಾಸ.

೪. "ಸಂತಃ ಸ್ವಯಂ ಪರಹಿತೇ ವಿಹಿತಾಭಿಯೋಗಾಃ' – ಭರ್ತೃಹರಿ

೫. 'ಆಚಾರ ಲಕ್ಷಣಂ ಧರ್ಮ, ಸಂತಶ್ಚಾಚಾರಲಕ್ಷಣಾಃ' – ಮಹಾಭಾರತ.

೬. ಅಧಿಗಚ್ಛೇ ಪದೇ ಸಂತಂ ಸಂಖಾರೂಪ ಸಮಂ ಸುಖಂ –
ಭಿಕ್ಕುವಗ್ಗ – ಗಾಥಾ – ೬
ಸಂತಂ ಅಸ್ಯ ಮನಂ ಹೋತಿ – ಅರ್ಹಂತ ವಗ್ಗ – ಗಾಥಾ – ೭.

೭. ಭಿಕ್ಷು ನಾರದ ಥೇರೋ The bodhisatva ideal

೮. R.D. Ranade, Mysticisan in Maharastra P. 42


□

# ಅಂತರಂಗದ ಶುದ್ಧಿ ಬಹಳ ಮುಖ್ಯ

ದಸ್ತಗೀರಸಾಬ್ ದಿನ್ನಿ

ಕಾಯ ಕರ್ರನೆ ಕಂದಿದಡೇನಯ್ಯಾ ? ಕಾಯ ಮಿರ್ರನೆ ಮಿಂಚಿದಡೇನಯ್ಯಾ?
ಅಂತರಂಗ ಶುದ್ಧವಾದ ಬಳಿಕ, ಚನ್ನಮಲ್ಲಿಕಾರ್ಜುನಯ್ಯಾ
ನೀನೊಲಿದ ಕಾಯವು ಹೇಗಿದ್ದಡೇನಯ್ಯಾ ?

ಇದು ಅಕ್ಕ ಮಹಾದೇವಿಯವರ ಒಂದು ಪ್ರಮುಖ ವಚನ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಹೊರ ಕಾಯದ ಬಗೆಗೆ ಚಿಂತನೆ. ದೇಹವನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವುದು.ಸಂತೆಯಲ್ಲಿ ಸಿಗುವ ವಸ್ತುಗಳನ್ನು ಖರೀದಿಸಿ ಮುಖಕ್ಕೆ ಹಚ್ಚಿಕೊಳ್ಳುವುದು.ಬಂಗಾರದ ಆಭರಣಗಳನ್ನು, ಬೆಲೆ ಬಾಳುವ ಬಟ್ಟೆಗಳನ್ನು ಧರಿಸುವುದು.ಒಂದೂ ಬಿಳಿ ಕೂದಲು ಕಾಣದಂತೆ ಕಪ್ಪು ಬಣ್ಣ ಲೇಪಿಸಿಕೊಳ್ಳುವುದು ಇದು ನಿತ್ಯ ನಡೆದಿದೆ. ಹುಟ್ಟಿನಿಂದಲೇ ನೋಡಲು ಕಪ್ಪು ಇರುವ, ಅಸಹ್ಯವಾಗಿ ಕಾಣಿಸುವ ವ್ಯಕ್ತಿಗಳೂ ನಮ್ಮ ನಡುವೆ ಇದ್ದಾರೆ. ಇಲ್ಲಿ ವ್ಯಕ್ತಿ ಬಾಹ್ಯವಾಗಿ ಹೇಗೆ ಕಾಣಿಸುತ್ತಾನೆ ಎಂಬುದು ಯಾವತ್ತೂ ನಮಗೆ ಮುಖ್ಯವಲ್ಲ. ನಮ್ಮ ದೇಹದಲ್ಲಿ ಒಳ್ಳೆಯ ಮನಸ್ಸಿದೆಯಾ? ಆ ಮನಸ್ಸು ಅರಿವಿಗೆ ಒಳಗಾಗಿದೆಯಾ? ನಮ್ಮ ನಡೆ ನುಡಿ ಒಂದಾಗಿದೆಯಾ ಎನ್ನುವುದು ಬಹಳ ಮುಖ್ಯ. ಅಲ್ಲಮಪ್ರಭು ಹೇಳುವಂತೆ ನಿಜವಾದ ಆಭರಣವೆಂದರೆ ಜ್ಞಾನ. ನಾವು ಜ್ಞಾನದ ಆಭರಣವನ್ನು ಧರಿಸಿಕೊಂಡು ಜನರ ಗಮನವನ್ನು ಸೆಳೆಯಬೇಕು. ಅರಿವನ್ನು ಪಡೆದುಕೊಂಡ ಮೇಲೆ ನಮ್ಮ ಅಂತರಂಗವನ್ನು ಪರಿಶುದ್ಧವಾಗಿ ಇಟ್ಟುಕೊಳ್ಳಬೇಕು. ಈ ಕಾಯಕ್ಕೆ ಕಾಮದ, ಹಣದ, ಅಧಿಕಾರದ ರೋಗ ಬಡಿಯಬಾರದು.

ಕಾಯ ನೋಡಲು ಚಂದ ಇದ್ದರೆ ಮೋಹ ಉಂಟಾಗುತ್ತದೆ. ಅದು ಕಾಮಕ್ಕೆ ಕಾರಣವಾಗುತ್ತದೆ. ಇಂತಹ ಸಂದರ್ಭದಲ್ಲಿ ಮನಸ್ಸು ಅತ್ಯಾಚಾರ ಮಾಡಲೂ ಹೇಸುವುದಿಲ್ಲ. ಇದರಿಂದ ಕೇಡೇ ಹೆಚ್ಚು. ಸಮಾಜದಲ್ಲಿ ನಿತ್ಯ ಅಲ್ಲಲ್ಲಿ ಇಂತಹ ಪ್ರಸಂಗಗಳು ನಡೆಯುತ್ತಲೇ ಇವೆ. ಕೊನೆಗೆ ಅದು ಸಾವಿನಲ್ಲಿ ಪರ್ಯವಸಾನಗೊಂಡು ಇದ್ದವರಲ್ಲಿ ದುಃಖವನ್ನು ಮಡುಗಟ್ಟಿಸಿ ಹೋಗುತ್ತದೆ. ಹೀಗಾಗಿ ಅಕ್ಕನ ಈ ವಚನ ಬಹಳ ಮುಖ್ಯವಾಗಿ ಅಂತರಂಗ ಶುದ್ಧತೆಯ ಬಗೆಗೆ ಧ್ವನಿಸುತ್ತದೆ. ಯಾವ ವ್ಯಕ್ತಿಯ ಅಂತರಂಗ ನಿಷ್ಕಲ್ಮಷವಾಗಿ ಇರುತ್ತದೆಯೋ ಆ ವ್ಯಕ್ತಿ ಬದುಕಿನುದ್ದಕ್ಕೂ ಒಳ್ಳೆಯ ಕೆಲಸಗಳನ್ನು ಮಾಡುತ್ತಾನೆ. ಸುತ್ತಲಿನ ಪರಿಸರದ ಮೇಲೂ ಸೂಜಿಗಲ್ಲಿನಂತೆ ಪ್ರಭಾವ ಬೀರುತ್ತಾನೆ. ಅಂತಹ ವ್ಯಕ್ತಿ ದೇವರ ಪ್ರೀತಿಗೂ ಪಾತ್ರನಾಗುತ್ತಾನೆ. □

ಮನೆ ನಂ. 8 ,ಪದ್ಮಾವತಿ ಕಾಲೋನಿ, ಆಸಾಪುರ ರಸ್ತೆ, ರಾಯಚೂರು ಜಿಲ್ಲೆ
ಮೊ : 9448220710



## ಕ್ಷೇತ್ರ ವಾರ್ತೆಗಳು



ವಿಜಯಪುರ ಜಿಲ್ಲೆ ಬಸವನ ಬಾಗೇವಾಡಿ: ಲಿಂ.ಮುರಿಗೆವ್ವ ಲಿಂ. ಮಲಕಾಜಪ್ಪ, ಲಿಂ.ಬಿ.ಎಸ್. ಪಾಟೀಲ, ಲಿಂ. ಸಿದ್ಧಲಿಂಗವ್ವ ಲಿಂ. ಬಸಯ್ಯ ಹಿರೇಮಠ ದತ್ತಿ ಉಪನ್ಯಾಸ, ದಿನಾಂಕ: ೧೯.೦೩.೨೦೨೨, ಚಿತ್ರದಲ್ಲಿ: ಎಫ್.ಡಿ. ಮೇಟಿ ವೀರಣ್ಣ ಮರ್ತೂರ, ಪೂಜ್ಯ ಸಿದ್ಧರಾಮ ಮಹಾಸ್ವಾಮಿಗಳು, ಗಿರಿಜಾ ಪಾಟೀಲ, ಹೆಚ್.ಬಿ. ಸಾತಿಹಾಳ, ಆರ್.ಜಿ. ಅಳ್ಳಗಿ ವೀರೇಶ ಕುಂಟೋಜಿ, ಎಸ್.ಕೆ. ಸೋಮನಕಟ್ಟೆ, ಈರಣ್ಣ ಅಳ್ಳಗಿ, ಚನ್ನಪ್ಪ ಅಳ್ಳಗಿ, ಎಸ್.ಟಿ. ವೀರೇಶ್



ಶಿವಮೊಗ್ಗ ಜಿಲ್ಲೆ ಶಿಕಾರಿಪುರ: ಲಿಂ. ಎಸ್. ಜಯದೇವಪ್ಪ ಸೂರಣಗಿ ದತ್ತಿ ಉಪನ್ಯಾಸ, ದಿನಾಂಕ:೨೫.೦೨.೨೦೨೨ ರವಿಕುಮಾರ್, ಮಮತ ರವಿಕುಮಾರ್, ಹೆಚ್.ಎನ್. ಮಹಾರುದ್ರ, ಸುಭಾಸ್ ಚಂದ್ರ ಸ್ಥಾನಿಕ್, ಡಾ. ಮುರುಘರಾಜ್ ಚಂದ್ರಶೇಖರ್, ಪುಷ್ಪ ಉಡುಚಾಣದ



ಕದಳಿ ಮಹಿಳಾ ವೇದಿಕೆ, ಮೈಸೂರು ದಿನಾಂಕ: ೧೫.೨.೨೦೨೨
ಅಂತರ ಪ್ರೌಢಶಾಲಾ ರಸಪ್ರಶ್ನೆ ಸ್ಪರ್ಧೆ, ಚಿತ್ರದಲ್ಲಿ : ಸುನಂದಾ, ನೀಲಲೋಚನ ಸ್ವಾಮಿ, ಶಾರದಾ ಶಿವಲಿಂಗಸ್ವಾಮಿ, ಜಯ ಸೋಮನಾಥ್, ಸಂಪತ್ ಕುಮಾರ್, ಧರಣೇಂದ್ರ ಮೂರ್ತಿ, ಕದಳಿ ಸೋದರಿಯರು ಮತ್ತು ವಿದ್ಯಾರ್ಥಿಗಳು.




ಶಿವಮೊಗ್ಗ : ಲಿಂ. ಜಿ.ಬಿ. ಮಲ್ಲೇಶ್ವರಪ್ಪ ಮತ್ತು ಲಿಂ. ಪಾರ್ವತಮ್ಮ ದತ್ತಿ ಉಪನ್ಯಾಸ, ದಿನಾಂಕ: ೦೭.೦೨.೨೦೨೨
ಚಿತ್ರದಲ್ಲಿ: ಕರಿಬಸವಯ್ಯ, ಇಂದಿರಮ್ಮ, ಆರ್.ಎಸ್. ಸ್ವಾಮಿ, ಆರ್. ಸದಾಶಿವಪ್ಪ,
ಲವಕುಮಾರ ಸ್ವಾಮಿ, ಶಿವಶಂಕರ್, ಸುನಿಲಾ ಎಂ.ಎ.



ಹಾವೇರಿ: ಕಾಯಕ ದಿನ ಹಾಗೂ ಪ್ರಮೀಳಾ ಪುಟ್ಟಪ್ಪ ಮೋಟೆಬೆನ್ನೂರ ದತ್ತಿ ಉಪನ್ಯಾಸ, ದಿನಾಂಕ: ೦೧.೦೩.೨೦೨೨
ಚಿತ್ರದಲ್ಲಿ: ಪ್ರಸನ್ನಕುಮಾರ, ರವಿಬಾಬು ಪೂಜಾರ, ಪ್ರೊ ಮಾರುತಿ ಶಿಡ್ಲಾಪುರ, ನಿರಂಜನ ಗುಡಿ
ಸಂತೋಷ ದೊಡ್ಡಮನಿ, ಪ್ರವೀಣ ಬ್ಯಾತನಾಳ, ಎಸ್.ವಿ. ಹೊಸಮನಿ



ಧಾರವಾಡ ಜಿಲ್ಲೆ ಅಣ್ಣಿಗೇರಿ: ಹುಬ್ಬಳ್ಳಿ ವೀರಮ್ಮ ಮತ್ತು ವೀರಪ್ಪ ಕುಮಸಿ ದತ್ತಿ ಮತ್ತು ಅಡ್ನೂರು ಲಿಂ. ಬಸನಗೌಡ ಪಾಟೀಲ
ದತ್ತಿ ಉಪನ್ಯಾಸ ದಿನಾಂಕ: ೧೦.೦೩.೨೦೨೨ ಚಿತ್ರದಲ್ಲಿ: ಡಾ. ಶಾಂತ ಲಕ್ಷ್ಮೇಶ್ವರ, ಪಿ.ಕೆ. ಕೋಕಾಟಿ
ಎಂ.ಎಸ್. ಮೇಲ್ಮುರಿ, ಎನ್.ಎಂ. ಯಲಬುರ್ಗಿ








ತುಮಕೂರು ಜಿಲ್ಲೆ ಗುಬ್ಬಿ : ಅಧ್ಯಕ್ಷರು ಚೇಳೂರು ಹೋಬಳಿ ಶರಣ ಸಾಹಿತ್ಯ ಪರಿಷತ್ ಘಟಕ, ಚೇಳೂರು ದತ್ತಿ ಉಪನ್ಯಾಸ
ದಿನಾಂಕ: ೦೯.೦೩.೨೦೨೨ ಚಿತ್ರದಲ್ಲಿ : ಎಂ.ಜಿ. ಸಿದ್ದರಾಮಯ್ಯ, ಜಯಣ್ಣ, ಹೇಮಂತ್ ಕುಮಾರ್, ಹರೀಶ್ ಮಾದಾಪುರ
ಶಿವಪ್ಪ, ಗಂಗಾಧರಯ್ಯ, ಗುರುಲಿಂಗಪ್ಪ, ನಟರಾಜ್




ಕಲಬುರ್ಗಿ ಜಿಲ್ಲೆ ಸೇಡಂ: ಲಿಂ. ಬಸವಣ್ಣಪ್ಪ ಸುಂಕದ ಸ್ಮಾರಕ ದತ್ತಿ ಉಪನ್ಯಾಸ, ದಿನಾಂಕ: ೦೯.೦೩.೨೦೨೨
ಚಿತ್ರದಲ್ಲಿ: ಡಾ ಸದಾನಂದ ಬೂದಿ, ರಾಜಶೇಖರ ವಣಕೇರಿ, ಮಲ್ಲಿಕಾರ್ಜುನ ರೆಡ್ಡಿ, ಮಹಾದೇವಿ, ಡಾ. ಶೋಭಾದೇವಿ ಚೆಕ್ಕಿ



ಬಾಗಲಕೋಟೆ ಜಿಲ್ಲೆ ಜಮಖಂಡಿ: ಲಿಂ. ದುಂಡಪ್ಪ ಸಂತಿ ಮತ್ತು ಲಿಂ. ಚೆನ್ನವ್ವ ಸಂತಿ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ,
ದಿನಾಂಕ: ೦೧.೦೩.೨೦೨೨ ಚಿತ್ರದಲ್ಲಿ: ಮಲ್ಲಿಕಾರ್ಜುನ ಇಂಡಿ, ಸಂತೋಷ ತಳಕೇರಿ, ಡಾ. ಟಿ. ಪಿ. ಗಿರಡ್ಡಿ
ಪ್ರೊ. ಬಸವರಾಜ ಕಡ್ಡಿ, ಎಂ. ಎ. ತಾಂವಸೆ, ಬಸಪ್ಪಣ್ಣನವರು, ಎನ್. ಬಿ. ಬಿರಾದಾರ, ಎಸ್. ಡಿ. ಸಂತಿ

ಹಾವೇರಿ ಜಿಲ್ಲೆ ಹಾನಗಲ್ಲ: ಲಿಂ. ಶರಣೆ ಶ್ರೀಮತಿ ಶಾಂತಮ್ಮ, ಚನ್ನಬಸಪ್ಪ ಬೆಲ್ಲದ ದತ್ತಿ ಉಪನ್ಯಾಸ,
ದಿನಾಂಕ: ೦೬.೦೩.೨೦೨೨, ಸಾನ್ನಿಧ್ಯ: ಶ್ರೀ ಮ.ನಿ.ಪ್ರ. ಶಿವಬಸವ ಮಹಾಸ್ವಾಮಿಗಳು, ವಿರಕ್ತಮಠ ಅಕ್ಕಿ ಆಲೂರ
ಚಿತ್ರದಲ್ಲಿ: ಎಸ್.ಸಿ. ಕಲ್ಲನಗೌಡ್ರ ಸುಜಾತಾ ಪಸಾರದ, ಕಲ್ಪನಾ ಎನ್. ಸವಣೂರ, ನೀಲಮ್ಮ ಮೂರಮಟ್ಟಿ
ಮಾರುತಿ ಶಿಡ್ಲಾಪುರ, ಗೀತಾ ಎಸ್. ಬೆಲ್ಲದ, ಕಾಂಚನಾ ಚವಟಿ

ಚಾಮರಾಜನಗರ: ಲಿಂ. ಪುಟ್ಟಮಾದಪ್ಪ ಕಾಳಮ್ಮ ಸ್ಮರಣಾರ್ಥ ದತ್ತಿ ಮತ್ತು ಲಿಂ. ಹೆಚ್.ಜಿ. ಶಾಂತಪ್ಪ ಸ್ಮರಣಾರ್ಥ ದತ್ತಿ
ಉಪನ್ಯಾಸ, ದಿನಾಂಕ:೮.೩.೨೦೨೨ ಚಿತ್ರದಲ್ಲಿ: ಶೈಲಕುಮಾರ್, ಕೆ.ಎಂ. ವೀರಶೆಟ್ಟರು,
ವಿ. ಮಲ್ಲಿಕಾರ್ಜುನಸ್ವಾಮಿ ದುಗ್ಗಟ್ಟಿ, ಬಿ.ಕೆ. ರವಿಕುಮಾರ್, ಬಿ.ಎಂ. ಪ್ರಭುಸ್ವಾಮಿ, ಎನ್. ಶಿವಪ್ರಸಾದ್ ಮಹದೇವಪ್ರಭು, ಡಿ.ಆರ್.
ಶೋಭಸಿದ್ಧರಾಜು, ಆರ್.ಎಸ್. ಲಿಂಗರಾಜು ಇತರರು

ತುಮಕೂರು ಜಿಲ್ಲೆ ಕುಣಿಗಲ್: ಲಿಂ. ಶ್ರೀಮತಿ ಜಯದೇವಮ್ಮ ಲಿಂ. ಶ್ರೀ ಪಟೇಲ್ ಸಿದ್ದಲಿಂಗಯ್ಯ ಸಂಸ್ಮರಣಾ ದತ್ತಿ ಉಪನ್ಯಾಸ
ದಿನಾಂಕ:೨೨.೦೨.೨೦೨೨ ಸಾನ್ನಿಧ್ಯ: ಪೂಜ್ಯ ಬಾ. ಶಿವಯೋಗಿ ದೇವರು, ಶ್ರೀ ಕಾರಂಜಿ ಮಠ ಬೆಳಗಾವಿ
ಚಿತ್ರದಲ್ಲಿ: ಎಂ.ಜಿ ಸಿದ್ದರಾಮಯ್ಯ, ಸೀತಾ ಲಕ್ಷ್ಮೀ, ಹಂ.ಸಿ ಕುಮಾರಸ್ವಾಮಿ, ಚಂದ್ರಶೇಖರಪ್ಪ, ರಾಮಣ್ಣ
ರಮೇಶ್ ಯಡಿಯೂರಪ್ಪ, ಎಂ.ಎಸ್. ಲಿಂಗ ರಾಜು





ಬಾಗಲಕೋಟೆ: ಲಿಂ. ಶ್ರೀ ಗುರುಪಾದಪ್ಪ ಸಿ. ಅಳ್ಳಗಿ ಹಾಗೂ ಲಿಂ. ಶ್ರೀಮತಿ ಈರವ್ವ ಗುರುಪಾದಪ್ಪ ಅಳ್ಳಗಿ ದತ್ತಿ ಉಪನ್ಯಾಸ,
ದಿನಾಂಕ:೧೨.೩.೨೦೨೨, ಸಾನ್ನಿಧ್ಯ: ಪೂಜ್ಯ ಶ್ರೀ ನಿ.ಪ್ರ. ಅಭಿನವ ಸಿದ್ಧಾರೂಢ ಸ್ವಾಮಿಗಳು, ಚಿತ್ರದಲ್ಲಿ: ಪ್ರೊ. ಎಸ್.ಎಚ್. ಲಗಳಿ
ಪ್ರೊ. ಬಸವರಾಜ ಕಡ್ಡಿ, ಡಾ. ಬಿ.ಎಮ್. ನುಚ್ಚಿ, ರವಿ ಎಸ್. ಬರಗುಂಡಿ, ಡಿ.ಎಸ್. ಪಾಟೀಲ, ಸಿ.ಎ. ಕುಮಾರ ಜಿಗಜಿನ್ನಿ
ಡಾ. ಆನಂದ ಎಂ. ಹುಲಗಬಾಳಿ, ಡಾ. ಆರ್.ಜಿ. ಅಳ್ಳಗಿ, ಚಂದ್ರಶೇಖರ ಶೆಟ್ಟರ, ಎಸ್.ಎಚ್. ಶೆಟ್ಟರ

ವಿಜಯಪುರ ಜಿಲ್ಲೆ ಸಿಂಧಗಿ : ಲಿಂ. ಶ್ರೀ ಮಲ್ಲೇಶಪ್ಪ ಮರೇಪ್ಪ ಶಹಾಪುರ ಹಾಗೂ ಲಿಂ. ಸಿದ್ಧಮ್ಮ ಮತ್ತು ಲಿಂ. ಸಿದ್ರಾಮಪ್ಪ
ಹನಮಶೆಟ್ಟಿ ದತ್ತಿ ಉಪನ್ಯಾಸ, ದಿನಾಂಕ:೧೨.೩.೨೦೨೨ ಚಿತ್ರದಲ್ಲಿ: ದೀಪಾ ಅರುಣ, ಬಸವರಾಜ ಸಿದ್ರಾಮಪ್ಪ ಹನಮಶೆಟ್ಟಿ
ಮಹಾದೇವ ಕುರೆ ಶಿವಶಂಕರ ಯಾದಗಿರಿ, ಕಲ್ಲಪ್ಪ ತಾರಾಪುರ, ಚನ್ನಪ್ಪ ಕತ್ತಿ, ಮಲ್ಲಿನಾಥ ಸಿಂಧಗಿ, ವೀರೇಶ ಇವಣಿ
ಶಿವಕುಮಾರ ಗು. ಶಿವಸಿಂಪಿ, ಸಂಗಣ್ಣ ಬ್ಯಾಕೋಡ, ಶೈಲಜಾ ಪಟ್ಟಣಶೆಟ್ಟಿ, ಶಕುಂತಲಾ ಸಂ. ಹಿರೇಮಠ, ಶಿವಾನಂದ ಕಲಬುರ್ಗಿ

ಬಳ್ಳಾರಿ: ಲಿಂ. ಸಂಗನಕಲ್ಲು ದೊಡ್ಡ ಶರಣಪ್ಪ, ಹಂಪಮ್ಮ ದತ್ತಿ ಉಪನ್ಯಾಸ, ದಿನಾಂಕ:೧೨.೩.೨೦೨೨
ಚಿತ್ರದಲ್ಲಿ: ಮರಿಯಮ್ಮ, ರಾಘವರೆಡ್ಡಿ, ಪ್ರಭಾಕರ ರೆಡ್ಡಿ, ವಿ. ನಾಗಿರೆಡ್ಡಿ, ಬೆಸೇಜ ರೆಡ್ಡಿ, ಬಸವರಾಜ, ರಾಮಚಂದ್ರ ಶಿವರಾಮ,
ಎಸ್.ಎನ್. ರುದ್ರಪ್ಪ



ಬೀದರ್ ಜಿಲ್ಲೆ ಭಾಲ್ಕಿ: ಶರಣ ತತ್ವ ದರ್ಶನ, ದಿನಾಂಕ: ೨೧.೦೩.೨೦೨೨
ಚಿತ್ರದಲ್ಲಿ: ರಾಜಶೇಖರ ಅಷ್ಟೂರೆ, ಬಂಡೆಪ್ಪ ಕಾರಾಮುಂಗಿ, ಚಂದ್ರಶೇಖರ ಬಿರಾದಾರ, ಕಿಶನ್ ರಾವ್ ಪಾಟೀಲ
ಅಶೋಕ್ ಭಂಡಾರಿ, ಶಂಭುಲಿಂಗ ವಿ ಕಾಮಣ್ಣ,ಡಿ ಡಿ ಶಿಂಧೆ



ದಾವಣಗೆರೆ ಜಿಲ್ಲೆ ಚನ್ನಗಿರಿ: ಶರಣೆ ಗಂಗಮ್ಮ, ಶರಣ ಕೆ. ಉಜ್ಜಿನಪ್ಪ ದತ್ತಿ ಮತ್ತು ಶರಣ ಪಾಂಡೋಮಟ್ಟಿ ಗೌಡ್ರ ಸಣ್ಣವೀರಪ್ಪ ಶರಣೆ ಶಿವಮ್ಮ ದತ್ತಿ ಉಪನ್ಯಾಸ, ದಿನಾಂಕ: ೧೩.೩.೨೦೨೨ ಚಿತ್ರದಲ್ಲಿ: ಡಾ. ಬಿ.ವಿ. ವಸಂತಕುಮಾರ್, ಎಂ.ಎಸ್. ಮಲ್ಲೇಶಪ್ಪ, ಯು. ಬಸವರಾಜಪ್ಪ, ಕೆ.ವಿ. ಸೋಮಶೇಖರಪ್ಪ, ಸರೋಜ ನಾಗರಾಜ್, ಹೆಚ್.ಎಸ್. ಮಲ್ಲಿಕಾರ್ಜುನಪ್ಪ, ಬಿ. ಶಿವಲಿಂಗಪ್ಪ




ರಾಯಚೂರು : ಲಿಂ. ಶ್ರೀ ಬಂಡಿ ಶರಣಪ್ಪ ಗಣೇಕಲ್ ಹಾಗೂ ಶ್ರೀ ಶೇಖರಪ್ಪ ಸಕ್ರಿ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ, ದಿನಾಂಕ: ೧೯.೦೩.೨೦೨೨ ಚಿತ್ರದಲ್ಲಿ: ಸೋಮನಾಥ. ಡಿ, ಡಾ. ಸರ್ವಮಂಗಳ ಸಕ್ರಿ, ಎಂ. ಬಸಪ್ಪ ತಿಪ್ಪಾರೆಡ್ಡಿ, ಅಂಬಾಪತಿ ಪಾಟೀಲ್, ಲಲಿತಾ ಎಂ., ದಾನಮ್ಮ ಸುಭಾಷ್ಚಂದ್ರ, ಶರಣಬಸವ ತಿಪ್ಪಾರೆಡ್ಡಿ, ರಂಗಮುನಿ, ರತ್ನಪಾಟೀಲ್, ಸೌಜನ್ಯ ಸುಜಾತ, ವಿಜಯಲಕ್ಷ್ಮಿ, ನಿರ್ಮಲಾ ಪಾಟೀಲ್







ಕದಳಿ ಮಹಿಳಾ ವೇದಿಕೆ, ರಾಯಚೂರು : ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ, ದಿನಾಂಕ: ೧೫.೩.೨೦೨೨
ಚಿತ್ರದಲ್ಲಿ: ರುದ್ರಮ್ಮ ಅಮರೇಶ ಹಾಸಿನಾಳ, ಡಾ. ಸರ್ವಮಂಗಳ ಸಕ್ರಿ, ಡಾ ರಾಜಶ್ರೀ ಕಲ್ಲೂರಕರ್
ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಭಾರತಿ ಕುಲಕರ್ಣಿ, ರಂಗಣ್ಣ ಪಾಟೀಲ ಅಳ್ಳುಂಡಿ, ವೆಂಕಟೇಶ ಬೇವಿನಬೆಂಚಿ
ರೇಖಾ ಪಾಟೀಲ, ರೂಪಾ ಕುಲಕರ್ಣಿ, ರೇಷ್ಮಾ ಯಶೋಧಾ ಕು. ಬುಶ್ರಾ ಮತೀನ್



ಕದಳಿ ಮಹಿಳಾ ವೇದಿಕೆ, ಹಾವೇರಿ : ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ, ದಿನಾಂಕ: ೧೫.೩.೨೦೨೨
ಚಿತ್ರದಲ್ಲಿ: ದಾಕ್ಷಾಯಣಿ ಗಾಣಿಗೇರ, ಅಮೃತಮ್ಮ ಶೀಲವಂತರ, ಸಿದ್ದುಮತಿ ನೆಲವಗಿ, ಸೌಭಾಗ್ಯ ಹಿರೇಮಠ
ಲಲಿತಾ ಹೊರಡಿ, ಭಿಕ್ಷಾವರ್ತಿಮಠ, ಕೆ.ಆರ್. ಹಿರೇಮಠ, ಶಂಕರ ತುಮ್ಮಣ್ಣನವರ



ಬೆಂಗಳೂರು ಗ್ರಾಮಾಂತರ: ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಹಾಗೂ ಪದಾಧಿಕಾರಿಗಳ ಪದಗ್ರಹಣ ಕಾರ್ಯಕ್ರಮ, ದಿನಾಂಕ:೧೩.೩.೨೦೨೨. ಚಿತ್ರದಲ್ಲಿ: ಚಂದ್ರಶೇಖರ ಹಡಪದ್, ಕರುಣ ಶ್ರೀನಾಥ್, ಲಕ್ಷ್ಮೀ ಭಗವಾನ್ ಬೇಡಿ, ಆರಾಧ್ಯ, ಜಲಜಾಕ್ಷಿ, ಆರ್. ಮುನಿರಾಜು, ರೇಖಾ ರವೀಂದ್ರಸಿಂಗ್, ವರಲಕ್ಷ್ಮೀ



ವಿಜಯಪುರ ಜಿಲ್ಲೆ ಮುದ್ದೇಬಿಹಾಳ: ಶ್ರೀ ಅಮರೇಶ ನಾಲತವಾಡ ಮತ್ತು ಲಿಂ ದೊಡ್ಡಪ್ಪ ಮ. ಪಣೇದಕಟ್ಟಿ ದತ್ತಿ ಉಪನ್ಯಾಸ,
ದಿನಾಂಕ: ೨೦.೦೨.೨೦೨೨ ಚಿತ್ರದಲ್ಲಿ: ಎಸ್.ಬಿ. ಬಂಗಾರಿ, ಬಸವರಾಜ ನಾಲತವಾಡ
ವ್ಹಿ.ಎಮ್. ಪಾಟೀಲ ಸ್ಪಂದನಾ, ಶೀಲಾ, ಸರೋಜಿನಿ ನಾಲತವಾಡ, ವಿಜಯಾ, ಕಾಶಿಬಾಯಿ ರಾಂಪೂರ
ನಂದಾ ಕಂಠಿ, ತೇಜಸ್ವಿನಿ, ದಾನಮ್ಮಾ, ರವಿ ಬಿರಾದಾರ, ಬಾಪುಗೌಡ ಪಾಟೀಲ.



ಕದಳಿ ಮಹಿಳಾ ವೇದಿಕೆ, ಭದ್ರಾವತಿ : ಶರಣೆ ಸುಶೀಲಮ್ಮ ಗುರುಸಿದ್ದಪ್ಪ ದತ್ತಿ ಉಪನ್ಯಾಸ, ದಿನಾಂಕ:೨೦.೩.೨೦೨೨
ಚಿತ್ರದಲ್ಲಿ: ಹೇಮಾವತಿ ಚಿಗಟೇರಪ್ಪ, ಗಂಗಾ ಕುಬಸದ್, ಮಲ್ಲಿಕಾಂಬ, ದಾಕ್ಷಾಯಣಮ್ಮ, ದೇವಿಕಾ, ಸುಶೀಲಮ್ಮ, ಕವಿತಾ



ಕದಳಿ ಮಹಿಳಾ ವೇದಿಕೆ, ಬಾಗಲಕೋಟೆ : ಲಿಂ. ಶ್ರೀ ಸಂಗನಬಸಪ್ಪ ಹುಚ್ಚಪ್ಪ ದತ್ತಿ ಉಪನ್ಯಾಸ, ದಿನಾಂಕ:೧೭.೦೨.೨೦೨೨
ಸಾನ್ನಿಧ್ಯ: ಪರಮಪೂಜ್ಯ ಶ್ರೀ ಷ.ಬ್ರ.ಡಾ. ಶಿವಕುಮಾರ ಶಿವಾಚಾರ್ಯ ಸ್ವಾಮೀಜಿ, ಚಿತ್ರದಲ್ಲಿ: ಡಾ. ಜಿ.ಜಿ. ಹಿರೇಮಠ, ಬಾದಾಮಿ,
ಶಿವಾನಂದ ಶೆಲ್ಲಿಕೇರಿ, ಬಿ. ಮರೇಗುದ್ದಿ, ಮಹೇಶ ಅಂಗಡಿ, ಎಸ್.ಬಿ. ಕರಬಾಶೆಟ್ಟಿ, ರವಿ ಹತ್ತಿ

## ಕ್ಷೇತ್ರ ವಾರ್ತೆಗಳು

ಮೈಸೂರು : ಶಕುಂತಲ ಜಯದೇವ ಶರಣ ಪ್ರಶಸ್ತಿ, ದಿನಾಂಕ: ೧೯.೦೩.೨೦೨೨
ಪ್ರಶಸ್ತಿ ಪುರಸ್ಕೃತರು: ಎಲ್. ಶಿವಲಿಂಗಪ್ಪ
ಮಾತೆ ಬಸವೇಶ್ವರಿ
ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು
ಶ್ರೀ ಶಿವರಾತ್ರಿ ದೇಶಿಕೇಂದ್ರ
ಮಹಾಸ್ವಾಮಿಗಳು
ಚಿತ್ರದಲ್ಲಿ: ಹೆಳವರಹುಂಡಿ ಸಿದ್ದಪ್ಪ
ಕುಮಾರಸ್ವಾಮಿ, ಮ.ಗು. ಸದಾನಂದಯ್ಯ
ಪ್ರೊ. ಮಲ್ಲಿಕಾರ್ಜುನ ಮೊರಬದ
ಪ್ರೊ. ಮಲೆಯೂರು ಗುರುಸ್ವಾಮಿ
ಶಕುಂತಲ ಜಯದೇವ
ಶಾರದಾ ಶಿವಲಿಂಗಸ್ವಾಮಿ

ಬೆಂಗಳೂರು: ಜರಗನಹಳ್ಳಿ ಸಿದ್ದಮ್ಮ
ನಂಜುಂಡಪ್ಪ ಶರಣ ದತ್ತಿ ಪ್ರಶಸ್ತಿ
ದಿನಾಂಕ: ೧೮.೦೩.೨೦೨೨
ಪ್ರಶಸ್ತಿ ಪುರಸ್ಕೃತರು:
ಡಾ. ಬಿ. ನಂಜುಂಡಸ್ವಾಮಿ
ಎಚ್.ಟಿ. ಶೈಲಜಾ
ಚಿತ್ರದಲ್ಲಿ: ಎನ್. ಬಸವರಾಜು
ಎನ್. ಚಂದ್ರಶೇಖರ್, ಶುಭದ ಶಿವಶಂಕರ್
ಪ್ರೊ. ಮಲೆಯೂರು ಗುರುಸ್ವಾಮಿ
ಚಂದ್ರಶೇಖರ ಉಪಾಲ, ವೀರಭದ್ರಪ್ಪ
ಚಿದಾನಂದ ಎಂ. ಗೌಡ
ಕೆ.ವಿ. ನಾಗರಾಜಮೂರ್ತಿ

ಆಲೂರು: ಕದಳಿ ಮಹಿಳಾ ವೇದಿಕೆಯ ಉದ್ಘಾಟನೆ ಮತ್ತು ವಿಶ್ವ ಮಹಿಳಾ ದಿನಾಚರಣೆ, ದಿನಾಂಕ: ೧೯.೦೩.೨೦೨೨
ಚಿತ್ರದಲ್ಲಿ: ಎಂ.ಎನ್ ಕುಮಾರಸ್ವಾಮಿ, ಸುಶೀಲಾ ಸೋಮಶೇಖರ್ ಡಾ. ಜಯರಾಜ್, ಶಾಂತ ಅತ್ನಿ
ಎಂ.ಟಿ. ಮಲ್ಲೇಶ್, ಶಿವಮೂರ್ತಿ ಗೋಪಿನಾಥ್, ವಿಜಯಕಾಂತ್, ಲಲಿತಾ

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine Date of Publication 1 April 2022
Total Pages 64 (Include Cover Pages)

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು



ದಾವಣಗೆರೆ: ಮಹಾಶರಣ ಲಿಂ ಮಾಗನೂರು ಬಸಪ್ಪ ಮತ್ತು
ಲಿಂ. ಸರ್ವಮಂಗಳಮ್ಮ ದತ್ತಿ ಉಪನ್ಯಾಸ, ದಿನಾಂಕ:೨೩.೦೩.೨೦೨೨
ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು ಗದುಗಿನ ಡಾ. ಶ್ರೀ ತೋಂಟದ ಸಿದ್ಧರಾಮ ಮಹಾಸ್ವಾಮಿಗಳು
ಚಿತ್ರದಲ್ಲಿ: ಡಾ. ಗೊ.ರು. ಚನ್ನಬಸಪ್ಪ, ಪ್ರೊ. ಮಲೆಯೂರು ಗುರುಸ್ವಾಮಿ, ಎಂ.ಜಿ. ಈಶ್ವರಪ್ಪ
ಕೆ.ಬಿ. ಪರಮೇಶ್ವರಪ್ಪ, ಬಿ. ವಾಮದೇವಪ್ಪ, ಎಂ.ಬಿ. ಸಂಗಮೇಶ್ವರಗೌಡ್ರು, ಎಂ.ಬಿ. ಸುನಂದ
ಚಿಕ್ಕೋಳ್ ಈಶ್ವರಪ್ಪ, ಕುಸುಮ ಲೋಕೇಶ್, ಕೆ.ಸಿ. ಲಿಂಗರಾಜು, ಕಡದಕಟ್ಟೆ ತಿಮ್ಮಣ್ಣ

494 ಶ್ರೀಮತಿ ಗಂಗಮ್ಮ ಶ್ರೀಶೈಲ ಕೊಣ್ಣೂರ
ಸುಹಾಗ ಕಾಲನಿ,
ವಿಶ್ವೇಶ್ವರ ಸರ್ಕಲ್
ವಿಜಯಪುರ – 586 109

Published by: Go.Ru. Channabasappa, Akhila Bharatha Sharana Sahitya Parishat (Regd.),
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at: Sathyasri Printers Pvt. Ltd., No. 16/1, 3rd Cross, 2nd Main Road, Kasturiba Nagar, Bengaluru 26
Editor : Dr. M.S. Ashadevi